|| ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಶ್ರೀ ಉಜ್ಜಯಿನೀಸದ್ಧರ್ಮಪೀಠಾಧೀಶ್ವರ

ಜಗದ್ಗುರು

# ಶ್ರೀ ಸಿದ್ಧಲಿಂಗಶಿವಯೋಗಿ ಚರಿತ್ರಂ

ಶ್ರೀಹಿಮವತ್ಕೇದಾರ ಏಕೋರಾಮಪೀಠಾಧೀಶ್ವರ
ಶ್ರೀಜಗದ್ಗುರು ನೀಲಕಂಠಲಿಂಗಶಿವಾಚಾರ್ಯ
ಪದಪದ್ಮಪ್ರಾದುರ್ಭೂತ
ಪಂ|| ಶ್ರೀ ಕೈಲಾಸಲಿಂಗಶಿವಾಚಾರ್ಯ ವಿರಚಿತಂ





ಮೈಸೂರು
ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್
1956

|| ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಶ್ರೀ ಉಜ್ಜಯಿನೀಸದ್ಧರ್ಮಪೀಠಾಧೀಶ್ವರ

ಜಗದ್ಗುರು

# ಶ್ರೀ ಸಿದ್ಧಲಿಂಗಶಿವಯೋಗಿ ಚರಿತ್ರಂ



ಶ್ರೀಹಿಮವತ್ಕೇದಾರ ಏಕೋರಾಮಪೀಠಾಧೀಶ್ವರ

ಶ್ರೀಜಗದ್ಗುರು ನೀಲಕಂಠಲಿಂಗಶಿವಾಚಾರ್ಯ

ಪದಪದ್ಮಪ್ರಾದುರ್ಭೂತ

ಪಂ॥ ಶ್ರೀ ಕೈಲಾಸಲಿಂಗಶಿವಾಚಾರ್ಯ ವಿರಚಿತಂ



ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1956

|| ಶ್ರೀಸಿದ್ಧಲಿಂಗಶಿವಯೋಗೀ ವಿಜಯತೇತರಾಮ್ ||

# ಸಮರ್ಪಣೆ

ಈ ಭರತಖಂಡದ ಸುಪ್ರಸಿದ್ಧ ಸನಾತನ ಧರ್ಮಗಳಲ್ಲಿ "ಶಿವಧರ್ಮಾಃ ಸನಾತನಾಃ" (ಸ್ಕಂದಪು....ಕೇದಾರಖಂ. ಅ. ೭) ಎಂಬ ವಿಖ್ಯಾತ ವೀರಶೈವಧರ್ಮ ಪ್ರತಿಷ್ಠಾಪಕ ಶ್ರೀಜಗದ್ಗುರು ರೇಣುಕ ದಾರುಕಾದಿ ಪಂಚಾಚಾರ್ಯರ ಪೀಠಗಳಲ್ಲಿ ಪರಿಶೋಭಿಸುತ್ತಿರುವ ಉಜ್ಜಯಿನೀ ಸದ್ಧರ್ಮಪೀಠದ ಜಗದ್ಗುರುಗಳೂ, ಪರಮತಪೋನಿಧಿಗಳೂ, ಸರ್ವದರ್ಶನವಿಶಾರದರೂ, ಶಿವಸಿದ್ಧಾಂತಪಾರಂಗತರೂ, ಶಿವಾರ್ಚನಧುರಂಧರರೂ, ಯಶಃಕಾಯರೂ, ಪ್ರಾತಃಸ್ಮರಣೀಯರೂ, ಆಗಿದ್ದ ಶ್ರೀ ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ನಮ್ಮ ಕರ್ಣಾಟಕ ಪ್ರಾಂತದಲ್ಲಿ ಪ್ರಾದುರ್ಭವಿಸಿ ಸೇತುಹಿಮಾಚಲಪರ್ಯಂತವಾಗಿರುವ ವೀರಶೈವ ಮಹಾಮತದ ಸ್ಥಾಪನಾಚಾರ್ಯ ಕರ್ತೃತ್ವಾನ್ವಿತ ಪಟ್ಟಾಧಿಕಾರದ ಪ್ರಭುತ್ವವನ್ನು ನಿರ್ವಹಿಸಿ ತಮ್ಮ ಶಿವಯೋಗಬಲದಿಂದ ಅನಂತ ಲೀಲೆಗಳನ್ನು ಪ್ರದರ್ಶಿಸಿ ವಿಶ್ವವಂದ್ಯರಾಗಿದ್ದರು. ಶ್ರೀ ಸಿದ್ಧಲಿಂಗಶಿವಯೋಗಿಯ ಚರಿತ್ರವನ್ನು ಪಂ|| ಶ್ರೀ ವಿರೂಪಾಕ್ಷಶಾಸ್ತ್ರಿಕೃತ ಶ್ರೀ ಸಿದ್ಧಲಿಂಗೇಶ ವಿಜಯದಿಂದಲೂ ಶ್ರೀ ಪಂಚಾಚಾರ್ಯಪ್ರಭಾ ಪತ್ರಿಕೆಗಳಿಂದಲೂ ನಮ್ಮ ಅನುಭವದಿಂದಲೂ ಸಂಗ್ರಹಿಸಿ ಶಿವಭಕ್ತಗಣಮನೋಹರವಾದ ಗ್ರಂಥರೂಪದಿಂದ ಚಿರಸ್ಮರಣಾರ್ಥವಾಗಿ ವಿರಚಿಸಿ ಶ್ರೀ ಸಿದ್ಧಲಿಂಗಶಿವಯೋಗಿ ಮಹಾತ್ಮರಿಗೆ ನಮ್ಮ ಭಕ್ತಿಕಾಣಿಕೆಯನ್ನು ಶ್ರೀದಾರುಕಜಯಂತಿಸಮಯದಲ್ಲಿ ಸಮರ್ಪಿಸಿದ್ದೇವೆ.

ಶಕೆ ೧೮೭೮
ದುರ್ಮುಖಿ ಸಂ||
ವೈಶಾಖ ಶು|| ೫



ಶ್ರೀ ಸಿದ್ಧಲಿಂಗಶಿವಯೋಗಿ ಕೃಪಾಪಾತ್ರ
**ಪಂ|| ಶ್ರೀ ಕೈಲಾಸಲಿಂಗಶಿವಾಚಾರ್ಯರು**
ಶ್ರೀ ಹಿಮವತ್ಕೇದಾರಸಿಂಹಾಸನ, ಉಖಾಮಠ.



ಚರಿತ್ರನಾಯಕರಾದ

ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ

ಮಹಾಸ್ವಾಮಿಗಳವರು

॥ ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ॥

# ಉಜ್ಜಯಿನೀ ಜಗದ್ಗುರು
# ಶ್ರೀ ಸಿದ್ಧಲಿಂಗಶಿವಯೋಗಿ ಚರಿತ್ರ

## *ಉಜ್ಜಯಿನೀ ಸದ್ಧರ್ಮಪೀಠದ ವರ್ಣನೆ

ಶ್ರೀಮದುಜ್ಜಯಿನೀ ಸದ್ಧರ್ಮಪೀಠವು ವೀರಶೈವಮಹಾಮತ ಸ್ಥಾಪನಾಚಾರ್ಯ ಶ್ರೀಜಗದ್ಗುರು ದಾರುಕಾಚಾರ್ಯಪರಂಪರಾಧಿಷ್ಠಿತವಾಗಿರುವದು. ಶ್ರೀ ದಾರುಕ ಭಗವತ್ಪಾದರು ಲಿಂಗದಿಂದವತರಿಸಿದ ಮೂಲಸ್ಥಾನವು ಮಧ್ಯಭಾರತಪ್ರಾಂತದಲ್ಲಿರುವ ಕ್ಷಿಪ್ರಾನದೀತೀರದ ಉಜ್ಜಯಿನೀ ಮಹಾಶಿವಕ್ಷೇತ್ರದಲ್ಲಿರುವ ಶ್ರೀವಟಸಿದ್ಧೇಶ್ವರ ಮಹಾಲಿಂಗದ ಸಾನ್ನಿಧ್ಯದಲ್ಲಿ ವಿರಾಜಮಾನವಾಗಿದ್ದರೂ ಸಿದ್ಧಾಂತಸ್ಥಾಪನೆಗಾಗಿ ತದ್ವತ್ ದಕ್ಷಿಣಭಾರತದ ಕರ್ಣಾಟಕ ಪ್ರಾಂತದಲ್ಲಿ ಪ್ರವಹಿಸುತ್ತಿರುವ ತುಂಗಭದ್ರಾನದೀತೀರದಲ್ಲಿ ವಿರಾಜಿಸುವ ಪಂಪಾಸರೋವರದ ಸಮೀಪದ ಉಜ್ಜಯಿನೀ ಮಹಾಶಿವಕ್ಷೇತ್ರದಲ್ಲಿಯೂ ಪರಿಶೋಭಿಸುತ್ತಲಿದೆ.

ಈ ಪೀಠದ ಪ್ರಥಮಾಚಾರ್ಯ ದಾರುಕಾಚಾರ್ಯರ ನಾಮವು ಶಿವಮಹಾಪುರಾಣದ ೯ ನೆಯ ಅಧ್ಯಾಯದ ಅಷ್ಟಾವಿಂಶತಿ ಯೋಗಾ

---

* ಉಜ್ಜಯಿನೀ ಕ್ಷೇತ್ರದರ್ಶನಾಪೇಕ್ಷಿಗಳು—ಹೊಸಪೇಟೆ ಜಂಕ್ಷನ್‌ದಿಂದ ಕೊಟ್ಟೂರು ರೈಲು ಮಾರ್ಗವಾಗಿ ಹೋಗಿ ಕೊಟ್ಟೂರಿಗೆ ಇಳಿದರೆ ಅಲ್ಲಿಂದ ೯ ಮೈಲು ಆಗುವುದು. ಅಲ್ಲಿ ಬಸ್ಸಿನ ಸೌಕರ್ಯವಿರುತ್ತದೆ. ಹೊಸಪೇಟೆಯಿಂದಲೂ ಹರಿಹರ-ದಾವಣಗೆರೆಯಿಂದಲೂ ಬಸ್ಸಿನ ಸೌಕರ್ಯವುಂಟು.

ಚಾರ್ಯ ಪಾಶುಪತಮತಾಚಾರ್ಯ ಪರಂಪರಾಸಂದರ್ಭವಶಾತ್ ಉಪಮನ್ಯುಕೃಷ್ಣಸಂವಾದದಲ್ಲಿ ಈ ಪ್ರಕಾರ ವಿವರಿಸಲ್ಪಟ್ಟಿರುತ್ತದೆ.—

ಶ್ವೇತ–ಸುತಾರ–ಮದನ–ಸುಹೋತ್ರ–ಕಂಕ–ಲೌಗಾಕ್ಷಿ–ಮಹಾಮಾಯ-ಜೈಗೀಷವ್ಯ–ದಧಿವಾಹ–ಋಷಭಮುನಿ-ಉಗ್ರ–ಅತ್ರಿ-ಸುಪಾಲಕ ಗೌತಮ–ವೇದಶಿರಮುನಿ – ಗೋಕರ್ಣ – ಗುಹಾವಾಸಿ–ಶಿಖಂಡಿ–ಜಟಾಮಾಲಿ–ಅಟ್ಟಹಾಸ–ದಾರುಕ–ಲಾಂಗುಲಿ – ಮಹಾಕಾಲ–ಶೂಲಿದಂಡಿ–ಮುಂಡೀಶ-ಸಹಿಷ್ಣು-ಸೋಮಶರ್ಮ ಮತ್ತು ನಕುಲೀಶ್ವರ ಈ ಅಷ್ಟಾವಿಂಶತಿ ಯೋಗಾಚಾರ್ಯರು ವಾರಾಹಕಲ್ಪದ ಸಪ್ತಮ ಮನ್ವಂತರದಲ್ಲಿ ಯುಗಕ್ರಮದಿಂದ ಹೇಳಲ್ಪಟ್ಟಿರುತ್ತಾರೆ.

ಈ ಅಷ್ಟಾವಿಂಶತಿ ಯೋಗಾಚಾರ್ಯರಿಗೆ ಪ್ರತಿಯೊಬ್ಬರಿಗೂ ನಾಲ್ವರಂತೆ ಕ್ರಮಶಃ ಶಿಷ್ಯರಿರುತ್ತಾರೆ. ಶ್ವೇತ, ಶ್ವೇತಶಿಖ, ಶ್ವೇತಾಶ್ವ, ಶ್ವೇತಲೋಹಿತ, ದುಂದುಭಿ, ಶತರೂಡ, ಋಚೀಕ, ಕೇತುಮಾನ್, ವಿಕೋಶ, ವಿಕೇಶ, ಉಪಾಶ, ಪಾಪನಾಶನ, ಸುಮುಖ, ದುರ್ಮುಖ, ದುರ್ಗಮ, ದುರತಿಕ್ರಮ, ಸನತ್ಕುಮಾರ, ಸನಕ, ಸನಂದ, ಸನಾತನ, ಸುಧಾಮ, ವಿರಜ, ಶಂಖ, ಅಂಡಜ, ಸಾರಸ್ವತ, ಮೇಘ, ಮೇಘವಾಹ, ಸುವಾಹಕ, ಕಪಿಲ, ಆಸುರಿ, ಪಂಚಶಿಖ, ಬಾಷ್ಕಲ, ಪರಾಶರ, ಗರ್ಗ, ಭಾರ್ಗವ, ಅಂಗಿರಸ, ಬಲಬಿಂದು, ನಿರಾಮಿತ್ರ, ಕೇತುಶೃಂಗ, ತಪೋಧನ, ಲಂಬೋದರ, ಲಂಬ, ಲಂಬಾತ್ಮ, ಲಂಬಕೇಶಕ, ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸಿದ್ಧಿ, ಸುಧಾಮ, ಕಶ್ಯಪ, ವಸಿಷ್ಠ, ವಿರಜ, ಅತ್ರಿ, ಉಗ್ರ, ಗುರುಶ್ರೇಷ್ಠ, ಶ್ರವಣ, ಶ್ರವಿಷ್ಟಕ, ಕುಣಿ, ಕುಣಿಬಾಹು, ಕುಶರೀರ, ಕುನೇತ್ರಕ, ಕಾಶ್ಯಪ, ಉಶನಾ, ಚ್ಯವ, ಬೃಹಸ್ಪತಿ, ಉತಥ್ಯ, ವಾಮದೇವ, ಮಹಾಕಾಲ, ಮಹಾನಿಲ, ವಾಚಶ್ರ್ಯವ, ಸುವೀರ, ಶ್ಯಾವಕ, ಯತೀಶ್ವರ, ಹಿರಣ್ಯನಾಭ, ಕೌಶಲ್ಯ, ಲೋಕಾಕ್ಷಿ, ಕುಥುಮಿ, ಸುಮಂತು, ಜೈಮಿನಿ, ಕುಬಂಧ,

ಕುಶಕಂಧರ, ಪ್ಲಕ್ಷ, ದಾರ್ಭಾಯಣಿ, ಕೇತುಮಾನ್, ಗೌತಮ, ಭಲ್ಲವೀ, ಮಧುಪಿಂಗ, ಶ್ವೇತಕೇತು, ಉಶಿಜ, ಬೃಹದಶ್ವ, ದೇವಲ, ಕವಿ, ಶಾಲಹೋತ್ರ, ಸುವೇಷ, ಶಂಬೂಕ, ಆಶ್ವಲಾಯನ, ಅಕ್ಷಪಾದ, ಕಣಾದ, ಉಲೂಕ, ವತ್ಸ, ಕುಲಿಕ, ಗರ್ಗ, ಮಿತ್ರಕ ಮತ್ತು ಋಷ್ಯ ಇವರು ಯೋಗಾಚಾರ್ಯಸ್ವರೂಪಿಯಾದ ಮಹೇಶ್ವರನ ೧೧೨ ಶಿಷ್ಯರು ಪಾಶುಪತಸಿದ್ಧರಾಗಿರುತ್ತಾರೆ. ಇವರು ಭಸ್ಮೋದ್ಧೂಲಿತ ವಿಗ್ರಹರು, ಸರ್ವಶಾಸ್ತ್ರಾರ್ಥತತ್ತ್ವಜ್ಞರು ವೇದವೇದಾಂಗಪಾರಗರು ಶಿವಾಶ್ರಮ ರತರು ಶಿವಜ್ಞಾನಪರಾಯಣರು ಸರ್ವಸಂಗವಿನಿರ್ಮುಕ್ತರು ಶಿವೈಕಾ ಸಕ್ತಚಿತ್ತರು ಸರ್ವದ್ವಂದ್ವಸಹರು ಧೀರರು ಸರ್ವಭೂತಹಿತರತರು ಋಜುಮೃದುಸ್ವಸ್ಥರು ಜಿತಕ್ರೋಧಜಿತೇಂದ್ರಿಯರು ರುದ್ರಾಕ್ಷಮಾಲಾ ಭರಣರು ತ್ರಿಪುಂಡ್ರಾಂಕಿತಮಸ್ತಕರು ಶಿಖಾಜಟರು ಸರ್ವಜಟರು ಅಜಟರು ಮುಂಡಶೀರ್ಷರು ಫಲಮೂಲಾಶನಪ್ರಾಯರು ಪ್ರಾಣಾ ಯಾಮಪರಾಯಣರು ಶಿವಾನುಭವಸಂಪನ್ನರು ಶಿವಧ್ಯಾನೈಕತತ್ಪರರು ಸಮುನ್ಮಥಿತಸಂಸಾರವಿಷವೃಕ್ಷಾಂಕುರೋದ್ಗಮರು ಪರಶಿವಪುರವನ್ನು ಕುರಿತು ಪ್ರಯಾಣಮಾಡಲು ಸನ್ನದ್ಧರು ಆಗಿರುತ್ತಿದ್ದರು. ಈ ದೇಶಿಕ ರನ್ನು ನಮಸ್ಕರಿಸಿ ಯಾವನು ಶಿವಾರ್ಚನಮಾಡುವನೋ ಅವನು ಶಿವಸಾಯುಜ್ಯವನ್ನು ನಿಶ್ಚಯವಾಗಿ ಪಡೆಯುತ್ತಾನೆ.

(ಶಿ-ಪು-ವಾ-ಸ-ಉ-ಭಾ-ಅ-೯)

ಈ ವಿಷಯವು ಲಿಂಗಮಹಾಪುರಾಣ, ವೀರಲೈಂಗೋಪನಿಷತ್, ಪಾಶುಪತ, ಸುಪ್ರಭೇದ, ಸ್ವಯಂಭು, ಶ್ರೀಕರಭಾಷ್ಯ, ಹಠಯೋಗ ಪ್ರದೀಪಿಕೆ, ಗಣಗಾರಿಕೆ ಮತ್ತು ಶ್ರೀ ನಿಜಗುಣಾರಾಧ್ಯವಿರಚಿತ ವಿವೇಕ ಚಿಂತಾಮಣಿಯ ಶಿವಯೋಗಪ್ರಕರಣ ಇತ್ಯಾದಿ ಗ್ರಂಥಗಳಲ್ಲಿಯೂ ಉಲ್ಲಿಖಿತವಾಗಿರುವದು. ಮೇಲ್ಕಂಡ ಕೆಲವು ಗ್ರಂಥಗಳ ಪ್ರಮಾಣಾನು ಸಾರವಾಗಿ ಕಲಿಯುಗದಲ್ಲಿ ಶ್ರೀ ಮರುಲಸಿದ್ಧನಾಮಾಚಾರ್ಯರು ಈ ಪೀಠದ ಮುಖ್ಯಾಚಾರ್ಯರೆಂತಲೂ ವರ್ಣಿತವಾಗಿರುತ್ತದೆ.

ತದ್ವನ್ಮರುಲಸಿದ್ಧಸ್ಯ ವಟಕ್ಷೇತ್ರೇ ಮಹತ್ತರೇ ।
ಸಿದ್ಧೇಶಲಿಂಗಾಜ್ಞನಸಂ ಸ್ಥಾನಮುಜ್ಜಯಿನೀಪುರೇ ॥
(ಸ್ವಾಯಂಭುವಾಗಮ)

ನಂದಿಗೋತ್ರಾಧಿನಾಥಶ್ಚ ಸಿಂಹಾಸನಪತಿಶ್ಚಯಃ ।
ಮರುಲಾರಾಧ್ಯಸನ್ನಾಮಾ ಜಗದ್ಗುರುತಮಶ್ಚಸಃ ॥
(ಸುಪ್ರಭೇದಾಗಮ)

ದಕ್ಷಿಣದೇಶದ ಉಜ್ಜಯಿನೀಕ್ಷೇತ್ರದಲ್ಲಿ ಮರುಲಸಿದ್ಧೇಶ್ವರ ಅಥವಾ ಸಿದ್ಧೇಶ್ವರನಾಮದಿಂದ ಶಿವಾಲಯವೊಂದು ವಿರಾಜಿಸುತ್ತಿರುವುದು. ಈ ಮಹಾಶಿವಾಲಯವು ಕ್ರಿ.ಶ. ೨ನೆಯ ಶತಮಾನದಲ್ಲಿ ನಿರ್ಮಿತವಾಗಿದೆ. ಈ ಶಿವಾಗಾರದ ಮಧ್ಯ ನಂದಿಮಂಟಪದ ಮುಂದೆ ಮೇಲುಭಾಗದಲ್ಲಿ ವಿಸ್ತೃತ ಕಮಲವು ವಿರಚಿತವಾಗಿದೆ. ಉತ್ತರ ದ್ವಾರದ ಮುಂದೆ ಬಲಭಾಗದಲ್ಲಿ ಮಹಾನಂದಿಮಂದಿರವಿದೆ. ಪಶ್ಚಿಮದ್ವಾರದ ಎಡಭಾಗದಲ್ಲಿ ಶಿಲಾಲಿಪಿಯಿದೆ. ಮತ್ತು ಪಶ್ಚಿಮಭಾಗ (ವಾಮಭಾಗ) ದಲ್ಲಿ ಮಹಾಶಕ್ತಿ ಗಿರಿಜಾಲಯವಿದೆ. ಸುತ್ತಲೂ ನಿರ್ಮಲ ಜಲಪೂರಿತ ಭಾವಿಗಳಿವೆ. ಉತ್ತರದ ಮಹಾಪ್ರಾಕಾರದಲ್ಲಿ ಅತ್ಯುನ್ನತ ಮಹಾ ದ್ವಾರವೂ ೫ ಅಂತಸ್ತಿನ ಗೋಪುರವೂ ಇರುವುದಲ್ಲದೆ ದಕ್ಷಿಣದಲ್ಲಿಯೂ ದ್ವಾರವಿದೆ.

ಈ ದೇವಾಲಯದ ಶಿಖರದ ಮೇಲೆ ನಂದೀಶ್ವರನ ಮೂರ್ತಿಯಿರುತ್ತದೆ. ಅಗ್ರದೇವತೆಯಾದ ಶ್ರೀಮರುಳಸಿದ್ಧೇಶ್ವರಮಹಾಲಿಂಗಕ್ಕೆ ಪ್ರತಿದಿವಸ ಪ್ರಾತಃಕಾಲ ಕಿರೀಟ ಕವಚಪೂಜೆ, ಮಧ್ಯಾಹ್ನ ಶ್ರೀಗುರುಗಳಿಂದ ಭೋಗಪೂಜೆ, ಸಾಯಂಕಾಲ ಸಂಕ್ಷೇಪ ಕವಚಪೂಜೆ ಮಧ್ಯ ರಾತ್ರಿ ಭಸಿತ-ರುದ್ರಾಕ್ಷಿಗಳಿಂದಲಂಕೃತವಾದ ಏಕಾಂತಪೂಜೆಗಳು ಸಕ್ರಮವಾಗಿಯೂ ವಿಧ್ಯುಕ್ತವಾಗಿಯೂ ಆಚರಿಸಲ್ಪಡುತ್ತವೆ. ಪ್ರಾಚೀನ ಕಾಲದಿಂದಲೂ ಸದ್ಧರ್ಮಪೀಠವನ್ನಾರೋಹಣಮಾಡಿದ ಜಗದ್ಗುರು

ಮಹಾಭಗವತ್ಪಾದರು ದೀಕ್ಷಾ-ಶಿಕ್ಷಾ-ಮೋಕ್ಷಗಳೆಂಬ ಗುರುತ್ವಾಧಿಕಾರವುಳ್ಳವರಾಗಿ ವೀರಶೈವ ಧರ್ಮಸಾಮ್ರಾಜ್ಯವನ್ನು ಪರಿಪಾಲಿಸುತ್ತ ಬಂದ ಧರ್ಮಪೀಠವು ಈ ದೇವಾಲಯದ ಪಶ್ಚಿಮದಲ್ಲಿರುತ್ತದೆ. ಪ್ರತಿವರ್ಷ ವೈಶಾಖ ಶು|| ೫ ದಿವಸ ಶ್ರೀದಾರುಕಜಯಂತಿಯ ಪ್ರಯುಕ್ತ ನಡೆಯುವ ರಥೋತ್ಸವವೂ ಶು|| ೬ ದಿವಸ ಮರುಳಸಿದ್ಧೇಶ್ವರನ ದೇವಾಲಯದ ಶಿಖರಕ್ಕೆ ಅರ್ಪಿಸುವ ತೈಲಧಾರಾಭಿಷೇಕಮಹೋತ್ಸವವೂ ಮೂರನೇ ದಿವಸ ಜಗದ್ಗುರುಗಳಿಂದ ನಡೆಯುವ ಧರ್ಮೋಪದೇಶವೂ, ಪಂಡಿತರಿಂದ ನಡೆಯುವ ಕೀರ್ತನ ಉಪನ್ಯಾಸಗಳೂ ಅನ್ನಸಂತರ್ಪಣಾದಿಗಳೂ ವೀರಶೈವರ ಮಿಗಿಲಾದ ಹೆಮ್ಮೆಯನ್ನು ಕೈಮಾಡಿ ತೋರಿಸುವಂತಿವೆ. ಅನೇಕ ಭಕ್ತರು ತಮ್ಮ ಇಷ್ಟಾರ್ಥಸಿದ್ಧಿಗಾಗಿ ಶಿಖರಕ್ಕೆ ಎರೆಯುವ ಎಣ್ಣೆಯು ಗಂಗಾಧಾರೆಯಂತೆ ಹರಿಯುತ್ತಿರುತ್ತದೆ. ಇದಲ್ಲದೆ ಪ್ರತಿವರ್ಷದ ಶ್ರಾವಣಮಾಸದಲ್ಲಿ ಶ್ರೀ ಮಹಾರುದ್ರಾಭಿಷೇಕ ಪುರಾಣ-ಪ್ರವಚನ-ಕೀರ್ತನಗಳು ವಿಜೃಂಭಣೆಯಿಂದ ಜರುಗುವವಲ್ಲದೆ ಕಾರ್ತಿಕಮಾಸದಲ್ಲಿ ಸಹಸ್ರದೀಪೋತ್ಸವವೂ ಶ್ರೀಮರುಳಸಿದ್ಧೇಶ್ವರಮೂರ್ತಿಯ ಆಂದೋಲಿಕೋತ್ಸವವೂ ಸಂಭ್ರಮದಿಂದ ನಡೆಯುವವು. ಪ್ರತಿ ಸೋಮವಾರ ವಿಶೇಷ ಪೂಜೆಯೊಂದಿಗೆ ಪಲ್ಲಕ್ಕಿಮಹೋತ್ಸವವು ದೇವಸ್ಥಾನದ ಪ್ರಾಕಾರದಲ್ಲಿ ನಡೆಯುತ್ತದೆ. ವೀರಶೈವರಿಂದ ತುಂಬಿದ ಕರ್ನಾಟಕದ ಮಧ್ಯದಲ್ಲಿ ಈ ಧರ್ಮಪೀಠವಿರುವುದರಿಂದಲೇ ವೀರಶೈವ ಧರ್ಮವು ಎಂದಿನಿಂದಲೂ ಉಜ್ವಲವಾಗಿ ಮೆರೆಯುತ್ತಿರುವುದು.

## ಪೀಠಾಚಾರ್ಯ ಪರಂಪರೆ

ಶ್ರೀಮದುಜ್ಜಯಿನೀವಟಕ್ಷೇತ್ರಸಿದ್ಧೇಶ್ವರಲಿಂಗದಿಂದಾವಿರ್ಭವಿಸಿದ ಈ ಪೀಠಾಚಾರ್ಯರು ಕೃತಯುಗದಲ್ಲಿ ಶ್ರೀಜಗದ್ಗುರು ದ್ವ್ಯಕ್ಷರಶಿವಾಚಾರ್ಯ ಎಂಬ ನಾಮದಿಂದಲೂ, ತ್ರೇತಾಯುಗದಲ್ಲಿ ಶ್ರೀಜಗದ್ಗುರು ದ್ವಿಮುಖಶಿವಾಚಾರ್ಯ ಎಂಬ ನಾಮದಿಂದಲೂ, ದ್ವಾಪರಯುಗದಲ್ಲಿ

ದಾರುಕಶಿವಾಚಾರ್ಯ ಎಂಬ ನಾಮದಿಂದಲೂ, ಕಲಿಯುಗದಲ್ಲಿ ಶ್ರೀಜಗದ್ಗುರು ಮರುಲಾರಾಧ್ಯ ಎಂಬ ನಾಮದಿಂದಲೂ ಪ್ರಸಿದ್ಧರಾಗಿ ಜಗದ್ಗುರುಗಳಾಗಿ ವೀರಶೈವಮತದ ಶಿಕ್ಷಣ-ರಕ್ಷಣ-ಆಚಾರ-ಪ್ರಾಯಶ್ಚಿತ್ತಾದಿ ಸಕಲ ಧರ್ಮಾಧಿಕಾರದೊಡನೆ ವಿರಾಜಿಸಿದರು. ಅನಂತರ ಕಲಿಯುಗದಲ್ಲಿ ಅಧಿಕಾರ ವಹಿಸಿದ ಪೀಠಾಚಾರ್ಯರ ಹೆಸರುಗಳನ್ನು ಪರಿಶೋಧಿಸಿ ಸಿಕ್ಕಷ್ಟನ್ನು ವಿವರಿಸಲಾಗಿದೆ.

೧ ಶ್ರೀಜಗದ್ಗುರು ಮರುಲಾರಾಧ್ಯಶಿವಾಚಾರ್ಯ
೨ ಶ್ರೀಜಗದ್ಗುರು ಮಲ್ಲಿಕಾರ್ಜುನಶಿವಾಚಾರ್ಯ
೩ ಶ್ರೀಜಗದ್ಗುರು ಸಿದ್ಧೇಶ್ವರಶಿವಾಚಾರ್ಯ
೪ ಶ್ರೀಜಗದ್ಗುರು ಗುರುನಾಥಶಿವಾಚಾರ್ಯ
೫ ಶ್ರೀಜಗದ್ಗುರು ಶಿವಯೋಗೀಂದ್ರಶಿವಾಚಾರ್ಯ
೬ ಶ್ರೀಜಗದ್ಗುರು ತ್ರ್ಯಂಬಕಶಿವಾಚಾರ್ಯ
೭ ಶ್ರೀಜಗದ್ಗುರು ಶಿವಾನಂದಶಿವಾಚಾರ್ಯ
೮ ಶ್ರೀಜಗದ್ಗುರು ಮರುಲಸಿದ್ಧಶಿವಾಚಾರ್ಯ
೯ ಶ್ರೀಜಗದ್ಗುರು ಅಮಿತಾನಂದಶಿವಾಚಾರ್ಯ
೧೦ ಶ್ರೀಜಗದ್ಗುರು ನೀಲಗ್ರೀವಶಿವಾಚಾರ್ಯ
೧೧ ಶ್ರೀಜಗದ್ಗುರು ನಂದೀಶ್ವರಶಿವಾಚಾರ್ಯ
೧೨ ಶ್ರೀಜಗದ್ಗುರು ಗುರುರಾಜಶಿವಾಚಾರ್ಯ
೧೩ ಶ್ರೀಜಗದ್ಗುರು ಮಹಾದೇವಶಿವಾಚಾರ್ಯ
೧೪ ಶ್ರೀಜಗದ್ಗುರು ಮಾಯಾಂತಕಶಿವಾಚಾರ್ಯ
೧೫ ಶ್ರೀಜಗದ್ಗುರು ಗುರುಶಾಂತಶಿವಾಚಾರ್ಯ
೧೬ ಶ್ರೀಜಗದ್ಗುರು ವೃಷಭಧ್ವಜಶಿವಾಚಾರ್ಯ
೧೭ ಶ್ರೀಜಗದ್ಗುರು ವೀರವೃಷೇಂದ್ರಶಿವಾಚಾರ್ಯ
೧೮ ಶ್ರೀಜಗದ್ಗುರು ದ್ವಿತೀಯಶಿವಾಚಾರ್ಯ

೧೯ ಶ್ರೀಜಗದ್ಗುರು ಮಲ್ಲಿಕಾರ್ಜುನಶಿವಾಚಾರ್ಯ

೨೦ ಶ್ರೀಜಗದ್ಗುರು ಶಿವಲಿಂಗಶಿವಾಚಾರ್ಯ

೨೧ ಶ್ರೀಜಗದ್ಗುರು ದ್ವಿತೀಯಸಿದ್ಧೇಶ್ವರಶಿವಾಚಾರ್ಯ

೨೨ ಶ್ರೀಜಗದ್ಗುರು ಲಿಂಗಾನಂದಶಿವಾಚಾರ್ಯ

೨೩ ಶ್ರೀಜಗದ್ಗುರು ಸೋಮೇಶ್ವರಶಿವಾಚಾರ್ಯ

೨೪ ಶ್ರೀಜಗದ್ಗುರು ಮುಕ್ತಿನಾಥಶಿವಾಚಾರ್ಯ

೨೫ ಶ್ರೀಜಗದ್ಗುರು ವಾಮದೇವಶಿವಾಚಾರ್ಯ

೨೬ ಶ್ರೀಜಗದ್ಗುರು ಜಗದೀಶ್ವರಶಿವಾಚಾರ್ಯ

೨೭ ಶ್ರೀಜಗದ್ಗುರು ವಿದ್ಯೇಶ್ವರಶಿವಾಚಾರ್ಯ

೨೮ ಶ್ರೀಜಗದ್ಗುರು ಮಾಹೇಶ್ವರಶಿವಾಚಾರ್ಯ

೨೯ ಶ್ರೀಜಗದ್ಗುರು ಅಘೋರಶಿವಾಚಾರ್ಯ

೩೦ ಶ್ರೀಜಗದ್ಗುರು ಜನ್ಮವೀರಶಿವಾಚಾರ್ಯ

೩೧ ಶ್ರೀಜಗದ್ಗುರು ಜಟಾಸಿದ್ಧಶಿವಾಚಾರ್ಯ

೩೨ ಶ್ರೀಜಗದ್ಗುರು ಗಂಗಾಧರಶಿವಾಚಾರ್ಯ

೩೩ ಶ್ರೀಜಗದ್ಗುರು ಸಿದ್ಧವೀರಶಿವಾಚಾರ್ಯ

೩೪ ಶ್ರೀಜಗದ್ಗುರು ರುದ್ರೇಶ್ವರಶಿವಾಚಾರ್ಯ

೩೫ ಶ್ರೀಜಗದ್ಗುರು ಶಾಂತಲಿಂಗಶಿವಾಚಾರ್ಯ

೩೬ ಶ್ರೀಜಗದ್ಗುರು ವೈ॥ ನಂದೀಶ್ವರಶಿವಾಚಾರ್ಯ

೩೭ ಶ್ರೀಜಗದ್ಗುರು ಗಂಗಾಧರಶಿವಾಚಾರ್ಯ

೩೮ ಶ್ರೀಜಗದ್ಗುರು ಮಹಾಲಿಂಗಶಿವಾಚಾರ್ಯ

೩೯ ಶ್ರೀಜಗದ್ಗುರು ಪಂಚಾನನಶಿವಾಚಾರ್ಯ

೪೦ ಶ್ರೀಜಗದ್ಗುರು ಬಿಲ್ವದಳಶಿವಾಚಾರ್ಯ

೪೧ ಶ್ರೀಜಗದ್ಗುರು ಮಾರಮರ್ದನಶಿವಾಚಾರ್ಯ

೪೨ ಶ್ರೀಜಗದ್ಗುರು ನಾಗಭೂಷಣಶಿವಾಚಾರ್ಯ

೪೩ ಶ್ರೀಜಗದ್ಗುರು ಶ್ಯಾಮಕಂಧರಶಿವಾಚಾರ್ಯ
೪೪ ಶ್ರೀಜಗದ್ಗುರು ಚಂದ್ರಶೇಖರಶಿವಾಚಾರ್ಯ
೪೫ ಶ್ರೀಜಗದ್ಗುರು ಗುರುಸಿದ್ಧ ಶಿವಾಚಾರ್ಯ
೪೬ ಶ್ರೀಜಗದ್ಗುರು ಭವಹರಶಿವಾಚಾರ್ಯ
೪೭ ಶ್ರೀಜಗದ್ಗುರು ಚಂಡೀಶ್ವರಶಿವಾಚಾರ್ಯ
೪೮ ಶ್ರೀಜಗದ್ಗುರು ಅಮೃತೇಶ್ವರಶಿವಾಚಾರ್ಯ
೪೯ ಶ್ರೀಜಗದ್ಗುರು ಸುಜ್ಞಾನಶೇಖರಶಿವಾಚಾರ್ಯ
೫೦ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ
೫೧ ಶ್ರೀಜಗದ್ಗುರು ಶೇಷಭೂಷಣಶಿವಾಚಾರ್ಯ
೫೨ ಶ್ರೀಜಗದ್ಗುರು ಶಂಕರಾನಂದಶಿವಾಚಾರ್ಯ
೫೩ ಶ್ರೀಜಗದ್ಗುರು ಮಹಾಮಲ್ಲಿಕಾರ್ಜುನಶಿವಾಚಾರ್ಯ
೫೪ ಶ್ರೀಜಗದ್ಗುರು ಶಂಭುಲಿಂಗಶಿವಾಚಾರ್ಯ
೫೫ ಶ್ರೀಜಗದ್ಗುರು ಶಿವಯೋಗಪ್ರಭಾಕರಶಿವಾಚಾರ್ಯ
೫೬ ಶ್ರೀಜಗದ್ಗುರು ಚಿನ್ಮಹೋದಧಿಶಿವಾಚಾರ್ಯ
೫೭ ಶ್ರೀಜಗದ್ಗುರು ಶಿವಜ್ಞಾನಸಂಜೀವನಶಿವಾಚಾರ್ಯ
೫೮ ಶ್ರೀಜಗದ್ಗುರು ಗಣೇಂದ್ರಮಂದಾರಶಿವಾಚಾರ್ಯ
೫೯ ಶ್ರೀಜಗದ್ಗುರು ಸಿದ್ಧೇಶ್ವರಶಿವಾಚಾರ್ಯ
೬೦ ಶ್ರೀಜಗದ್ಗುರು ವರಸಿದ್ಧೇಶ್ವರಶಿವಾಚಾರ್ಯ
೬೧ ಶ್ರೀಜಗದ್ಗುರು ಮಹಾಂತದೇವಶಿವಾಚಾರ್ಯ
೬೨ ಶ್ರೀಜಗದ್ಗುರು ಮಲ್ಲಿಕಾರ್ಜುನಶಿವಾಚಾರ್ಯ
೬೩ ಶ್ರೀಜಗದ್ಗುರು ವೃಷ್ಟಿಶಂಕರಶಿವಾಚಾರ್ಯ
೬೪ ಶ್ರೀಜಗದ್ಗುರು ಶಂಭುಲಿಂಗಶಿವಾಚಾರ್ಯ
೬೫ ಶ್ರೀಜಗದ್ಗುರು ಮದನಾರಿಶಿವಾಚಾರ್ಯ
೬೬ ಶ್ರೀಜಗದ್ಗುರು ಮಾಯಾಕೋಲಾಹಲಶಿವಾಚಾರ್ಯ

೧೭ ಶ್ರೀಜಗದ್ಗುರು ಶಿವಲೀಲಾಚನ್ನವೀರಶಿವಾಚಾರ್ಯ
೧೮ ಶ್ರೀಜಗದ್ಗುರು ಪಂಚಾಕ್ಷರಶಿವಾಚಾರ್ಯ
೧೯ ಶ್ರೀಜಗದ್ಗುರು ಓಂಕಾರಶಿವಾಚಾರ್ಯ
೨೦ ಶ್ರೀಜಗದ್ಗುರು ಮುಕ್ತಿನಾಥಶಿವಾಚಾರ್ಯ
೨೧ ಶ್ರೀಜಗದ್ಗುರು ಮಹಾದೇವಶಿವಾಚಾರ್ಯ
೨೨ ಶ್ರೀಜಗದ್ಗುರು ಭರ್ಗೋದೇವಶಿವಾಚಾರ್ಯ
೨೩ ಶ್ರೀಜಗದ್ಗುರು ಬಾಲಸಿದ್ಧೇಶ್ವರಶಿವಾಚಾರ್ಯ
೨೪ ಶ್ರೀಜಗದ್ಗುರು ಚೆನ್ನವೃಷಭಶಿವಾಚಾರ್ಯ
೨೫ ಶ್ರೀಜಗದ್ಗುರು ವೃದ್ಧವೃಷೇಂದ್ರಶಿವಾಚಾರ್ಯ
೨೬ ಶ್ರೀಜಗದ್ಗುರು ಚನ್ನಮಲ್ಲಿಕಾರ್ಜುನಶಿವಾಚಾರ್ಯ
೨೭ ಶ್ರೀಜಗದ್ಗುರು ಮುಕ್ತಿಮಲ್ಲಿಕಾರ್ಜುನಶಿವಾಚಾರ್ಯ
೨೮ ಶ್ರೀಜಗದ್ಗುರು ಸಿದ್ಧಮಲ್ಲಿಕಾರ್ಜುನಶಿವಾಚಾರ್ಯ
೨೯ ಶ್ರೀಜಗದ್ಗುರು ಏಕೋದೇವಶಿವಾಚಾರ್ಯ
೩೦ ಶ್ರೀಜಗದ್ಗುರು ಆಚಾರ್ಯಭಾಸ್ಕರಶಿವಾಚಾರ್ಯ
೩೧ ಶ್ರೀಜಗದ್ಗುರು ಮೋಕ್ಷೇಶ್ವರಶಿವಾಚಾರ್ಯ
೩೨ ಶ್ರೀಜಗದ್ಗುರು ಸಿದ್ಧವೀರೇಶಶಿವಾಚಾರ್ಯ
೩೩ ಶ್ರೀಜಗದ್ಗುರು ಭದ್ರೇಶ್ವರಶಿವಾಚಾರ್ಯ
೩೪ ಶ್ರೀಜಗದ್ಗುರು ಅಮಿತಾನಂದಶಿವಾಚಾರ್ಯ
೩೫ ಶ್ರೀಜಗದ್ಗುರು ಷಡಕ್ಷರಶಿವಾಚಾರ್ಯ
೩೬ ಶ್ರೀಜಗದ್ಗುರು ಭಕ್ತಿವರ್ಧನಶಿವಾಚಾರ್ಯ
೩೭ ಶ್ರೀಜಗದ್ಗುರು ಪಾಶಹರಶಿವಾಚಾರ್ಯ
೩೮ ಶ್ರೀಜಗದ್ಗುರು ಮಹಿಮಾಕರಶಿವಾಚಾರ್ಯ
೩೯ ಶ್ರೀಜಗದ್ಗುರು ಶಿವಲಿಂಗಶಿವಾಚಾರ್ಯ
೪೦ ಶ್ರೀಜಗದ್ಗುರು ನಯನತ್ರಯಶಿವಾಚಾರ್ಯ

೯೧ ಶ್ರೀಜಗದ್ಗುರು ವಿರೂಪಾಕ್ಷಶಿವಾಚಾರ್ಯ
೯೨ ಶ್ರೀಜಗದ್ಗುರು ಮರುಲಸಿದ್ಧ ಶಿವಾಚಾರ್ಯ
೯೩ ಶ್ರೀಜಗದ್ಗುರು ಮಹಾಂತಮಲ್ಲಿಕಾರ್ಜುನಶಿವಾಚಾರ್ಯ
೯೪ ಶ್ರೀಜಗದ್ಗುರು ವೃಷ್ಟಿಮಲ್ಲಿಕಾರ್ಜುನಶಿವಾಚಾರ್ಯ
೯೫ ಶ್ರೀಜಗದ್ಗುರು ಶಿವಲಿಂಗಶಿವಾಚಾರ್ಯ
೯೬ ಶ್ರೀಜಗದ್ಗುರು ಬೃಹಚ್ಚನ್ನವೀರಶಿವಾಚಾರ್ಯ
೯೭ ಶ್ರೀಜಗದ್ಗುರು ವರಚೆನ್ನವೀರಶಿವಾಚಾರ್ಯ
೯೮ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ
೯೯ ಶ್ರೀಜಗದ್ಗುರು ಮರುಲಸಿದ್ಧ ಶಿವಾಚಾರ್ಯ
೧೦೦ ಶ್ರೀಜಗದ್ಗುರು ಜಟಾಗುರುಸಿದ್ಧ ಶಿವಾಚಾರ್ಯ
೧೦೧ ಶ್ರೀಜಗದ್ಗುರು ಚೆನ್ನವೃಷಭಶಿವಾಚಾರ್ಯ
೧೦೨ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ
೧೦೩ ಶ್ರೀಜಗದ್ಗುರು ಚೆನ್ನವೀರಶಿವಾಚಾರ್ಯ
೧೦೪ ಶ್ರೀಜಗದ್ಗುರು ಚೆನ್ನವೃಷಭಶಿವಾಚಾರ್ಯ
೧೦೫ ಶ್ರೀಜಗದ್ಗುರು ಗುರುಸಿದ್ಧ ಶಿವಾಚಾರ್ಯ
೧೦೬ ಶ್ರೀಜಗದ್ಗುರು ಮರುಳಸಿದ್ಧ ಶಿವಾಚಾರ್ಯ

ಈ ಪ್ರಕಾರ ಸದ್ಧರ್ಮಪೀಠದ ಅಧಿಪತಿಗಳಾಗಿ ಬಂದವರಲ್ಲಿ ೧೦೬ ನೇ ಶ್ರೀ ಮರುಳಸಿದ್ಧ ಶಿವಾಚಾರ್ಯ ಜಗದ್ಗುರುಗಳು ಪಾತಂಜಲಯೋಗಶಾಸ್ತ್ರದಲ್ಲಿಯೂ ಶಿವಯೋಗಸಿದ್ಧಾಂತದಲ್ಲಿಯೂ ಅಪ್ರತಿಹತ ಪಂಡಿತರಾಗಿದ್ದರು. ಮತ್ತು ಪರಮ ಶಿವಾನುಭೂತಿಯುತ ಸ್ಥಿತಪ್ರಜ್ಞರಾಗಿದ್ದರು. ಮತ್ತು ಶಿಷ್ಯಸಂತಾಪಹರಣ, ಪಾತಂಜಲಯೋಗಶಾಸ್ತ್ರ, ಶಿವಾನುಭವ ಇತ್ಯಾದಿ ಗ್ರಂಥಗಳನ್ನು ವಿರಚಿಸಿ ಮಹಾವಿದ್ವಾಂಸರೆಂದು ಪ್ರಖ್ಯಾತರಾಗಿದ್ದರು. ೧೯೦೩ ನೆಯ ಇಸವಿಯ ತಮ್ಮ ಜೀವಿತಕಾಲದಲ್ಲಿಯೇ ಪೀಠದ ಅಭಿವೃದ್ಧಿ ದೃಷ್ಟಿಯಿಂದ ಪದ್ಧತಿಯ ಮೇರೆಗೆ

ಸ್ಥಿರಚರಪಟ್ಟಾಧಿಕಾರ ಪ್ರದಾನಮಾಡಿದಪ್ರಕಾರ ೧೦೭ನೇ ಶ್ರೀ ಜಗದ್ಗುರು ಚನ್ನಬಸವಶಿವಾಚಾರ್ಯರು ಸ್ಥಿರಪಟ್ಟಾಧ್ಯಕ್ಷರೂ, ೧೦೮ನೇ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರು ಚರಪಟ್ಟಾಧ್ಯಕ್ಷರೂ ಆದರು.

ಪ್ರಕೃತದಲ್ಲಿ ಈ ೧೦೮ ನೆಯ ಚರಪಟ್ಟಾಧ್ಯಕ್ಷ ಜಗದ್ಗುರುಗಳ ಚರಿತ್ರವನ್ನು ವರ್ಣಿಸುವೆವು.



# ಶ್ರೀಮದುಜ್ಜಯಿನೀ ಸದ್ಧರ್ಮಪೀಠಾಧೀಶ್ವರ

# ಶ್ರೀಜಗದ್ಗುರು ಸಿದ್ಧಲಿಂಗರಾಜದೇಶಿಕೇಂದ್ರ ಮಹಾಸ್ವಾಮಿಗಳವರ ಚರಿತ್ರ

ಶಿವಪಂಚಾಕ್ಷರಮಹಾಮಂತ್ರ ದಿವ್ಯರತ್ನವಿಭೂಷಿತ, ಶಿವಭಕ್ತಿ ಸುಧಾಂಭೋಧಿ, ತಿಪ್ಪೇರುದ್ರಕಲಾದಾತ್ಯ, ಶೈವಶಾಸ್ತ್ರವಿಶಾರದ, ಜ್ಞಾನವೃದ್ಧ, ವಯೋವೃದ್ಧ, ತೇಜಸ್ವಿ, ದಯಾನಿಧಿ, ಸಚ್ಛಿರೋಮಣಿ, ಗಣ್ಯಮಾನ್ಯ ಚುಕ್ಕಾನಳ್ಳಿ, ಗ್ರಾಮದ ಮಠಾಧ್ಯಕ್ಷ ಚನ್ನವೃಷಾಖ್ಯನೆಂಬ ಗೃಹಸ್ಥನು ವಿರಾಜಿಸುತ್ತಿದ್ದನು. ಈತನಿಗೆ ಪಾತಿವ್ರತ್ಯಗುಣಮಂಡಿತೆ, ಶಿವಭಕ್ತಿರಸಾಸ್ವಾದೆ, ಕೃತಶಿವಪರಿಚರ್ಯೆ ಸತ್ಯಸೌಶೀಲ್ಯವರ್ಯೆ, ವರಗುಣಮಣಿಮಾಲೆ, ಶಾಂತಿಗಾಂಭೀರ್ಯಸೀಮೆ, ಶ್ರೀಭವಾನೀಕೃಪಾ ಪಾತ್ರೆಯಾದ ಶ್ರೀ ಕುಂ|| ಸೌ|| ಗುರುಸಿದ್ಧಾಂಬೆಯೆಂಬ ಸತಿಯಿದ್ದಳು. ಆ ಸಾಧ್ವೀಮಣಿಯು ಪುತ್ರಾಭಿಲಾಷೆಯಿಂದ ೫ ವರ್ಷಗಳ ವರೆಗೂ ಶಿವವ್ರತರೂಪ ಸುದುಷ್ಕರ ತಪಸ್ಸನ್ನು ಮಾಡಿದಳು. ಶ್ರೀ ಪಾರ್ವತೀ ಪತಿಯು ತಪಸ್ವಿನಿಯಾದ ಆ ಮಹಾದೇವಿಯ ಶಿವೋಪಾಸನೆಯಿಂದ ಆನಂದಪರವಶನಾಗಿ ಈ ಮೇರೆಗೆ ವರದಾನಮಾಡಿದನು.

ಎಲೌ ಸಾಧ್ವೀಮಣಿಯೇ ನಾನು ನಿನ್ನ ಅನನ್ಯ ಭಕ್ತಿಯಿಂದ ಪ್ರಸನ್ನನಾಗಿದ್ದೇನೆ. ನಿನ್ನ ಗರ್ಭದಲ್ಲಿ ಶ್ರೀ ಮರುಳಸಿದ್ಧ ಮಹಾಶಿವ ಯೋಗಿಯೇ ಧರಾತಲದಲ್ಲಿ ಶಿವಾದ್ವೈತಸಿದ್ಧಾಂತವನ್ನು ಪ್ರಚಾರ ಮಾಡಲು ತನ್ನ ಪೂರ್ಣಕಲಾಭರಿತನಾಗಿ ಪ್ರಾದುರ್ಭವಿಸಿ ಸದ್ಧರ್ಮ ಪೀಠವನ್ನು ಆರೋಹಣಮಾಡಿ ವಿಶ್ವವಿಖ್ಯಾತ ಮಹಾವಿಭೂತಿಪುರುಷ ನಾಗುವನು.

(ಶಂಕರಶಾಸ್ತ್ರಿಕೃತ ಈಶಾವಾಸ್ಯ ಉ-ಶಾಂ-ವ್ಯಾಖ್ಯೆ)



ಶ್ರೀಜಗದ್ಗುರು ಉಜ್ಜಯಿನೀಧರ್ಮಪೀಠದ ಮಹಾದ್ವಾರ




ಶ್ರೀ ಜ. ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು
(ಚಿಕ್ಕವಯಸ್ಸಿನವರಿದ್ದಾಗ)

ಶ್ರೀಮದುಜ್ಜಯಿನೀ ಸದ್ಧರ್ಮಪೀಠಾಧೀಶ್ವರ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳವರು ಶ್ರೀ ದಾರುಕಾಚಾರ್ಯರ ಪರಾವತಾರಿಗಳಾಗಿ ಶಾಲಿವಾಹನ ಶಕೆ ೧೮೧೨ನೇ ವಿಕೃತಿ ನಾಮಸಂವತ್ಸರದ ಮಾಘ ಬ|| ೭ ಭೌಮವಾರ ಶುಭಲಗ್ನದಲ್ಲಿ (೧೮೯೦ ನೆಯ ಇಸವಿ) ಮೈಸೂರು ರಾಜ್ಯಕ್ಕೆ ಸೇರಿದ ಚಿತ್ರದುರ್ಗ ಡಿ|| ಬಂಗಾರ ನಾಯಕನಹಳ್ಳಿ ಎಂಬ ಗ್ರಾಮದಲ್ಲಿ, ಗುರುಸ್ಥಲಮಠಾಧಿಕಾರಿಗಳ ವಂಶದಲ್ಲಿ ಜನ್ಮವನ್ನು ತಾಳಿದರು. ಬಾಲ್ಯದಲ್ಲಿಯೇ ಇವರ ಮುಖದ ಮೇಲೆ ಅತ್ಯದ್ಭುತವಾದ ಶಿವಕಳೆಯು ಪ್ರಜ್ವಲಿಸುತ್ತಿತ್ತು. ಈ ವಿಧವಾದ ದಿವ್ಯತೇಜಸ್ಸನ್ನು ನೋಡಿ ಜನರು ಈತನು ಲೋಕದಲ್ಲಿ ಮುಂದೆ ಮಹಾಮಹಿಮಾಶಾಲಿಯಾಗಿ ಮೆರೆಯುವನೆಂದು ನುಡಿಯುತ್ತಿದ್ದರು. ಇವರು ೧೩ ವರ್ಷ ವಯಸ್ಸಿನವರಾಗಿದ್ದಾಗ ಅಕಸ್ಮಾತ್ ಶ್ರೀಜಗದ್ಗುರು ಉಜ್ಜಯಿನೀ ಪೀಠಾಧೀಶ್ವರ ೧೦೬ನೆ ಮರುಳಸಿದ್ಧ ಶಿವಾಚಾರ್ಯಭಗವತ್ಪಾದರ ದೃಷ್ಟಿಗೆ ಬಿದ್ದರು. ಆಗ್ಗೆ ಆ ಪೀಠಾಧಿಪತಿಗಳು ಈ ಗುರುವಂಶೀಯ ಬಾಲಕನ ಮುಖದಲ್ಲೊಪ್ಪುತ್ತಿದ್ದ ದಿವ್ಯತೇಜಸ್ಸನ್ನು ಕಂಡು ವಿಸ್ಮಿತರಾಗಿ ಈತನು ನಮ್ಮ ಧರ್ಮಪೀಠವನ್ನಲಂಕರಿಸಿದರೆ ನಮ್ಮ ಪೀಠವು ಜಗದ್ವಿಖ್ಯಾತವಾಗುವದೆಂದು ಯೋಚಿಸಿ ಈ ಬಾಲಕನ ತಂದೆಯವರನ್ನು ಕರೆಯಿಸಿ ನೀವು ನಿಮ್ಮ ಈ ಮಗನನ್ನು ನಮ್ಮ ಪೀಠಕ್ಕೆ ಒಪ್ಪಿಸಬೇಕೆಂದು ಅಪ್ಪಣೆಮಾಡಿದರು. ಆಗ್ಗೆ ಈ ಬಾಲಕನ ತಂದೆಯವರು ಗುರುಗಳ ಅಪ್ಪಣೆಯಂತೆ ತಮ್ಮ ಮುದ್ದುಮಗನನ್ನು ಶ್ರೀಗುರುಪಾದಕ್ಕೆ ಒಪ್ಪಿಸಿದರು. ಜಗದ್ಗುರುಗಳು ೧೯೦೩ ನೆಯ ಇಸವಿಯಲ್ಲಿ ಈ ಮಹಾತ್ಮನಿಗೆ ಚರಪಟ್ಟದ ಉತ್ತರಾಧಿಕಾರವನ್ನು ವಹಿಸಿ ಉಜ್ಜಯಿನೀ ಜಗದ್ಗುರು ಪೀಠಕ್ಕೆ ಅಧಿಕಾರಿಯನ್ನಾಗಿ ಮಾಡಿದರು. ಕೆಲವು ಕಾಲಾನಂತರ ಸದರೀ ಪೀಠದ ೧೦೭ ನೆ ಸ್ಥಿರಪಟ್ಟಾಧಿಕಾರಿಗಳಾದ ಶ್ರೀಜಗದ್ಗುರು ಚನ್ನಬಸವಶಿವಾಚಾರ್ಯರು ಲಿಂಗೈಕ್ಯರಾದರು.

ವಸ್ತ್ರದಲ್ಲಿ ವ್ಯಾಪ್ತವಾದ ಸುಗಂಧವು ಮತ್ತೊಂದು ವಸ್ತ್ರದಲ್ಲಿ ವ್ಯಾಪಿಸುವಂತೆ ಜಗದ್ಗುರು ಶ್ರೀ ದಾರುಕಾಚಾರ್ಯ ನಿಷ್ಠನಿರತಿಶಯ ಗುರುತ್ವವು ಗುರುಕುಲತಿಲಕ ಶ್ರೀ ಸಿದ್ಧಲಿಂಗನಲ್ಲಿ ಕ್ರಮಶಃ ಪ್ರಾಪ್ತ ವಾಯಿತೆಂದೂ ಈ ಯೋಗೀಂದ್ರನು ಭೂತಲದಲ್ಲಿ ಶಿವಾದ್ವೈತವನ್ನು ಸಮುದ್ಧರಣಮಾಡುವದಕ್ಕೋಸ್ಕರ ಅವತರಿಸಿ ಉಜ್ಜಯಿನೀ ಕ್ಷೇತ್ರ ವಿರಾಜಮಾನ ಧರ್ಮಪೀಠವನ್ನಲಂಕರಿಸಿದನೆಂದೂ ಆಸ್ಥಾನ ವಿದ್ವಾನ್ ಶ್ರೀ ಉಮಚಿಗಿ ಶಂಕರಶಾಸ್ತ್ರಿಗಳು ತಾವು ರಚಿಸಿದ ಕೇನೋಪನಿಷತ್ತಿನ ವ್ಯಾಖ್ಯಾನದಲ್ಲಿ ವರ್ಣಿಸಿರುವರು. ಇದಲ್ಲದೆ—

**ಯಸ್ಯ ದೇವೇ ಪರಾಭಕ್ತಿರ್ಯಥಾದೇವೇ ತಥಾಗುರೌ ॥**

ಎಂಬಂತೆ ಭಗವತೀಶ್ರುತಿಯ ವಚನಕ್ಕೆ ವಿರೋಧವಾಗಬಾರದೆಂದು ವೀರಶೈವರ ನಮಸ್ಕಾರವು ಯಾರಲ್ಲಿ ಪ್ರವರ್ತಿತವಾಗುತ್ತದೆಯೋ ಆ ಸಿದ್ಧಲಿಂಗರಾಜದೇಶಿಕೇಂದ್ರಮಹಾಶಿವಯೋಗೀಶ್ವರನನ್ನು ವಂದಿಸುತ್ತೇನೆಂದು ಹೇಳಿ,

**ಯತ್ಸತ್ಕೃತ್ಯಾವಿದಧಾತಿ ಗ್ರಂಥನಿಚಯಂ ಸದ್ಭಕ್ತಿಯುಕ್ತೋ ಜನಃ**
**ಯಂ ಲಬ್ಧ್ವಾ ಲಭತೇ ಶ್ರಿಯಂ ನಿರವಧಿಂ ಶೈವೀಪರಾಂ ಚಿನ್ಮಯೀಂ ॥**
**ಯತ್ಸಂದರ್ಶನತಃ ಪ್ರಯಾತಿವಿಲಯಂ ತಾಪತ್ರಯಂದೇಹಿನಾಂ**
**ಸೋಸ್ತು ಶ್ರೀಗುರುಸಿದ್ಧಲಿಂಗಯತಿರಾಣ್ಮೇ ಶ್ರೇಯಸೇ ಭೂಯಸೇ ॥೭॥**

ಎಂದು ಸ್ತುತಿಸಿದ್ದಾರೆ.

ಶ್ರೀವೇದಾಗಮಪುರಾಣೇತಿಹಾಸ ಪ್ರಸಿದ್ಧ ವೀರಶೈವಮಹಾ ಮತಸ್ಥಾಪನಾಚಾರ್ಯ ಪರಂಪರಾಗತ ಶ್ರೀಜಗದ್ಗುರು ದಾರುಕಾ ಚಾರ್ಯ ಸದ್ಧರ್ಮಪೀಠಾಧೀಶ್ವರ ಶ್ರೀಜಗದ್ಗುರು ಮರುಳಸಿದ್ಧಮಹಾಶಿವ

ಯೋಗೀಶ್ವರ ಪದಪದ್ಮಪ್ರಾದುರ್ಭೂತ ನೂತನ ಶ್ರೀಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಶಿವಯೋಗೀಶ್ವರರು ಶ್ರೀಗುರೂಪದೇಶ ಬಲಾತ್ ತತ್‌ಕ್ಷಣದಲ್ಲಿಯೇ ಶಾಸ್ತ್ರೋಕ್ತ ಪರಮಶಿವಾರ್ಚನಪದ್ಧತಿಗನುಸಾರವಾಗಿ ಶಿವಯೋಗಾನುಷ್ಠಾನ ಕ್ರಮವನ್ನು ಕೈಕೊಂಡು ವ್ಯಾಕರಣ ಸಾಹಿತ್ಯ ಸಾಂಖ್ಯ ಯೋಗ ನ್ಯಾಯ ವೈಶೇಷಿಕ ಉತ್ತರ ಮೀಮಾಂಸಾ ಪ್ರಭೃತಿ ಶಾಸ್ತ್ರಗಳನ್ನು ಅಧ್ಯಯನಮಾಡಿದರು. ತದನಂತರ ಕಾಶ್ಮೀರಶೈವದರ್ಶನ ಗ್ರಂಥಾವಲಿ, ಶ್ರೀಕಂಠಭಾಷ್ಯ, ಶ್ರೀಕರಭಾಷ್ಯ, ಶಿವಾದ್ವೈತಮಂಜರಿ, ಕ್ರಿಯಾಸಾರ, ಅನುಭವಸೂತ್ರ, ಸಿದ್ಧಾಂತಶಿಖಾಮಣಿ, ಹಠಯೋಗಪ್ರದೀಪಿಕೆ, ಶ್ರೀನಿಜಗುಣಶಿವಯೋಗೀಶ್ವರಕೃತ(ಶಿವಯೋಗಪ್ರದೀಪಿಕೆಯ ಟೀಕೆಯಾದ) ಪರಮಾರ್ಥಪ್ರಕಾಶಿಕೆ ಇತ್ಯಾದಿ ಆಧ್ಯಾತ್ಮಿಕಗ್ರಂಥಗಳನ್ನು ಕಾಲಕ್ರಮೇಣ ಅಧ್ಯಯನಮಾಡುತ್ತ ಶಿವಯೋಗಧುರಂಧರರಾದರು. ಮತ್ತು ಪ್ರತಿನಿತ್ಯ ಪ್ರಾತಃಕಾಲ ಶಾಸ್ತ್ರೋಕ್ತರೀತ್ಯಾ ಶೌಚಾಚಮನವಿಧಿಯನ್ನು ಪೂರೈಸುತ್ತಿದ್ದರು. ವಿಶೇಷತಃ ಉತ್ತರಾಣಿ ಬೇರಿನಿಂದಲೇ ದಂತಧಾವನ ವಿಧಿಯನ್ನು ಸಾಗಿಸುತ್ತಿದ್ದರು.

ಕಾಲಕರ್ಮವಮಾಯೆಯೆಂಬಿವನುಗೆಲಲಹುದು ವಿಶಾಲ
ಮತಿಗಳು ಶಿವಭಕ್ತಿಯುಕ್ತರಾಗಿರೆ ।

(ಕೈವಲ್ಯಪದತಿ ಪ್ರ- ೩. ಪ- ೧೧(

ಇತ್ಯಾದಿ ಸೂತ್ರಗಳನ್ನು ಪಠಿಸುತ್ತ ಆನಂದಯುತ ಶಿವಸ್ಮರಣೆಯನ್ನು ಸರ್ವತೋಮುಖವಾಗಿ ಮಾಡುತ್ತಿದ್ದರು. ಸ್ವಸ್ತಿಕಾಸನ, ಸಿದ್ಧಾಸನ, ಪದ್ಮಾಸನ, ಮಯೂರಾಸನ, ಪಶ್ಚಿಮತಾನ, ಶೀರ್ಷಾಸನ, ವಿಪರೀತಕರಣಿ ಇತ್ಯಾದಿ ಆಸನಮುದ್ರಾದಿಗಳನ್ನು ಪ್ರಾತಃಕಾಲ ವಿನೋದದಿಂದಲೇ ಅಭ್ಯಾಸಮಾಡುತ್ತಿದ್ದರು. ಬಳಿಕೊಮ್ಮೆ ಷಟ್ಕರ್ಮಾಂತರ್ಗತಬಸ್ತಿಕ್ರಿಯಾದಿಗಳನ್ನು ಜಲದಲ್ಲಿ ಕೂತುಕೊಂಡು ನಡಿಸು

ತ್ತಿದ್ದರು. ಬಳಿಕೊಮ್ಮೆ ಸ್ನಾನಕಾಲದಲ್ಲಿ ಒಂಟಿಗಾಲಿನಿಂದಲೇ ನಿಂತು ಕೊಂಡು "ಹಿರಣ್ಯಶೃಂಗಂ" "ಪವಮಾನಃ" ಇತ್ಯಾದಿ ಸೂಕ್ತಗಳನ್ನು ಪಠಿಸುತ್ತಿದ್ದರು. ಪಾದಗಳಲ್ಲಿ ಕಟ್ಟಿಗೆ ಖಡಾವುಗಳು, ಕಟಿಯಲ್ಲಿ ಶುಭ್ರ ಕೌಪೀನ, ಕರದಲ್ಲಿ ಶ್ರೀಸದ್ಧರ್ಮಪೀಠದ ಮೊಹರಿನ ಉಂಗುರ(ಮುದ್ರಾ ಧರ್ಮ), ಕೊರಳಲ್ಲಿ ಬಂಗಾರದ ಶಿವಲಿಂಗದ ಪೇಟಿಕೆ (ಕರಡಿಗಿ), ಮಸ್ತಕ ದಲ್ಲಿ ಜಟಾಧಾರಣ, ಜಡೆಯಲ್ಲಿ ರುದ್ರಾಕ್ಷಧಾರಣ ಇತ್ಯಾದಿ ಚಿನ್ಹಗಳಿಂದ ಪರಿಶೋಭಿಸುವ ಕಪ್ಪುಕಾಯದ ಶಿವಯೋಗಿಗಳು. ಮಂಗಲಸ್ನಾನವಂ ಮುಗಿಸಿಕೊಂಡು ಶಿವಪೂಜಾಮಂದಿರವನ್ನು ಪ್ರವೇಶಮಾಡಿ ಪ್ರಾಣಾ ಯಾಮಾದಿಸಾಧನಗಳನ್ನು ಪ್ರತಿದಿವಸ ಅಭ್ಯಾಸಮಾಡುತ್ತ ಕುಂಡಲಿನೀ ಯೋಗವನ್ನು ಸಾಧಿಸಿಕೊಂಡಿದ್ದರು. ಈ ಮಹಾಶಿವಯೋಗಿಗಳು ಕುಂಡಲಿನೀಯೋಗಬಲದಿಂದ ಊರ್ಧ್ವರೇತಸ್ವಿಗಳಾಗಿದ್ದರು. ಪ್ರತಿನಿತ್ಯ ನಿಗಮಾಗಮಮಾರ್ಗಾನುಸಾರವಾದ ಶಿವಾರ್ಚನವಿಧಿಗನುಸಾರವಾಗಿ ಭಸ್ಮಸ್ನಾನ, ಭಸ್ಮೋದ್ಧೂಲನ, ಭಸ್ಮ ತಿರ್ಯಕ್ ತ್ರಿಪುಂಡ್ರಧಾರಣ, ರುದ್ರಾಕ್ಷಧಾರಣಗಳನ್ನು ಮಾಡುತ್ತಿದ್ದರು. ಮೈತುಂಬ ಭಸ್ಮರುದ್ರಾಕ್ಷಾ ಲಂಕೃತರಾದ ಶಿವಯೋಗಿಯ ಈ ದಿವ್ಯಮೂರ್ತಿಯು ಶಿವಭಕ್ತ ಗಣತತಿಗೆ ಸಾತಿಶಯಶ್ರದ್ಧಾಭಕ್ತ್ಯಾಸ್ಪದವಾಗುತ್ತಲಿತ್ತು. ಮತ್ತು ಸ್ವಸ್ತಿಕಾಸನದಲ್ಲಿ ಆಸೀನರಾಗಿ ಶಿವಲಿಂಗಾಭಿಷೇಕವನ್ನು ವೀರಶೈವಾ ಚಾರಪ್ರದೀಪಿಕೆಯ ಸಪ್ತಮಾಧ್ಯಾಯದಂತೆ ಪಂಚಗವ್ಯ ಪಂಚಾಮೃತಾ ದಿಕ್ರಮದಿಂದ ನಡಿಸಿ ಶ್ರೀಮಹಾರುದ್ರಾಭಿಷೇಕವನ್ನು ಅಹರಹಃ ನಡಿಸುತ್ತಿದ್ದರು. ಚಕ್ರವರ್ತಿ ಮಹಾರಾಜೋಪಚಾರಗಳಿಂದ ಶಿವ ಲಿಂಗಕ್ಕೆ ಉಪಚರಿಸುತ್ತಿದ್ದರು. ಶ್ರೀ ಪ್ರಣವಪಂಚಾಕ್ಷರಮಹಾಮಂತ್ರ ಜಪಧ್ಯಾನಧಾರಣಸಮಾಧಿಯನ್ನು ಅನುಷ್ಠಿಸುತ್ತಿದ್ದರು. ಕದಾಚಿತ್ ಪರಮಶಿವಾನಂದಪರವಶರಾಗಿ ತುರ್ಯತುರ್ಯಾತೀತ ಅವಸ್ಥೆಯನ್ನು ಹೊಂದುತ್ತಿದ್ದರು.

ಶ್ರೀ ಶಿವಯೋಗೀಶ್ವರರು ಅಕ್ಕಿ ಅನ್ನ, ಹೆಸರಬ್ಯಾಳಿಕಟ್ಟಿನ ಮೆಣಸಿನಸಾರು, ತೆಂಗಿನಕಾಯಿತುರಿ, ಗೋಕ್ಷೀರ, ಗೋದಧಿ, ಗೋಘೃತ, ಗೋದಿಯ ರೊಟ್ಟಿ ಅಥವಾ ಸಜ್ಜಕ (ಪಾಯಸ) ಸಕ್ಕರಿ, ದ್ರಾಕ್ಷಿ ಇತ್ಯಾದಿ ಸಾತ್ವಿಕಾಹಾರದೊಡನೆ ಶಿವಾರ್ಪಣವಿಧಿಯನ್ನು ನಡಿಸುತ್ತಿದ್ದರು. ಶಿವಾರ್ಪಣ ವಿಧಿಯನ್ನು ಪೂರೈಸಿಕೊಂಡು ಭಸ್ಮ ರುದ್ರಾಕ್ಷಭೂಷಿತ ಕಪ್ಪು ಕಾಯದ ಮೇಲೆ ಕಾಷಾಯವಸ್ತ್ರಗಳನ್ನು ಹೊದ್ದು ಪ್ರಸಾದಕಾಯರಾಗಿ ಸಭಾಮಂಟಪಕ್ಕೆ ಬಂದು ಶ್ರೀಸದ್ಧರ್ಮ ಪೀಠಾರೋಹಣಮಾಡಿದ ಬಳಿಕ ಶಿವಭಕ್ತಿ, ಭಸ್ಮ, ರುದ್ರಾಕ್ಷ, ಪ್ರಣವ ಪಂಚಾಕ್ಷರ ಮಹಾಮಂತ್ರ, ಶಿವಪಾದೋದಕ, ಪ್ರಸಾದ, ಗುರು ಲಿಂಗಜಂಗಮನಾಮಕ ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ, ಗೋರಕ್ಷಣ, ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಇತ್ಯಾದಿ ವಿಷಯಗಳನ್ನು ಶಾಸ್ತ್ರೋಕ್ತರೀತ್ಯಾ ಭಕ್ತರಿಗೆ ಬೋಧಿಸುತ್ತಿದ್ದರು. ಶ್ರೀಭಗವತ್ಪಾದರು ಸ್ವತಃ ಗುರುಲಿಂಗಜಂಗಮ ಭಕ್ತಿಪರರಾಗಿದ್ದರು. ಮತ್ತು ಸ್ವತಃ ಗೋಬ್ರಾಹ್ಮಣ ಪರಿಪಾಲಕರಾಗಿದ್ದರು. ಗೋವುಗಳು ಕರುಹಾಕಿದಾಗ್ಗೆ ಗಿಣ್ಣಮಾಡಿಸಿ ಜಂಗಮಾರ್ಚನ ಮಾಡಿಸಿ ತೃಪ್ತಿ ಪಡಿಸುತ್ತಿದ್ದರು. ಶ್ರಾವಣಮಾಸದಲ್ಲಿ ಸಹಸ್ರಗಣಂಗಳನ್ನು ಕರಿಸಿ ಯಥೇಚ್ಛ ಅನ್ನ ವಸ್ತ್ರಾದಿಗಳಿಂದ ತೃಪ್ತಿಪಡಿಸಿ ಪ್ರತಿಯೊಬ್ಬರಿಗೂ ಒಂದೊಂದು ರೂಪಾಯಿಯಂತೆ ದಕ್ಷಿಣೆಯನ್ನು ಕೊಡುತ್ತಿದ್ದರು. ಅಕಸ್ಮಾತ್ ಆಗಮನಮಾಡಿದ ಅತಿಥಿಗಳಿಗೆ ಸತ್ಕಾರ ಮಾಡುತ್ತಿದ್ದರು. ಅಭ್ಯರ್ಥಿಗಳಾದ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಉಚಿತ ದಾನ ದಕ್ಷಿಣಾದಿಗಳಿಂದ ಸಂತೋಷಪಡಿಸುತ್ತಿದ್ದರು. ದುಷ್ಟಶಿಕ್ಷಣ ಶಿಷ್ಟರಕ್ಷಣಪರ ರಾಗಿದ್ದರು. ಶರಣಾಗತಪರಿಪಾಲಕರಾಗಿದ್ದರು.

**ಮೈತ್ರೀಕರುಣಾಮುದಿತೋಪೇಕ್ಷಾಣಾಂ ಸುಖದುಃಖ ಪುಣ್ಯಾಪುಣ್ಯವಿಷಯಾಣಾಂ ಭಾವನಾತಶ್ಚಿತ್ತಪ್ರಸಾದನಮ್ ॥**

(ಪಾ-ಯೋಗ-೩೩)

ಈ ಸೂತ್ರೋಕ್ತರೀತ್ಯಾ ಶ್ರೀ ಶಿವಯೋಗಿಗಳು ಸರ್ವಪ್ರಾಣಿಗಳಲ್ಲಿಯೂ ಸದ್ಭಾವನಾಪರರಾಗಿದ್ದರು. ದುಃಖಿಗಳ ವಿಷಯದಲ್ಲಿ ಹಾರ್ದಿಕ ಸಹಾನುಭೂತಿಪರರಾಗಿದ್ದರು. ಪುಣ್ಯವಂತರವಿಷಯದಲ್ಲಿ ಪ್ರಸನ್ನಪರರಾಗಿದ್ದರು, ಪಾಪಿಗಳವಿಷಯದಲ್ಲಿ ತಟಸ್ಥರಾಗಿದ್ದರು. ಈ ಎಲ್ಲ ಸದ್ಗುಣಾತಿಶಯಗಳಿಂದ ಮಹಾತ್ಮರ ಸತ್ಕೀರ್ತಿಯು ದಿಗಂತ ವಿಶ್ರಾಂತವಾಯಿತು.

ನಾವು (ಶ್ರೀ ಕೈಲಾಸಲಿಂಗಶಿವಾಚಾರ್ಯರು) ಶ್ರೀಕಾಶೀಕ್ಷೇತ್ರದಲ್ಲಿ ಶಾಸ್ತ್ರಾಭ್ಯಾಸಮಾಡುತ್ತಿರುವಕಾಲದಲ್ಲಿ ಈ ಮಹಾತ್ಮರ ಚಿರಪರಿಚಿತ ಮಿತ್ರರೂ ಸಹಾಧ್ಯಾಯಿಗಳೂ ಆದ ಶ್ರೀ ಹಸಗೋಡಗ್ರಾಮದ ಪಟ್ಟಾಧ್ಯಕ್ಷರ ಮುಖದಿಂದ ಪುನಃ ಪುನಃ ಈ ಮಹಾಚಾರ್ಯಭಗವತ್ಪಾದರ ಯೋಗಚರ್ಯೆಯನ್ನು ಕೇಳಿ ಕೇಳಿ ನಮಗೆ ಶ್ರೀಶಿವಯೋಗೀಶ್ವರಸಂದರ್ಶನದಲ್ಲಿ ಅತಿಶಯ ಅಭಿಲಾಷೆಯು ಉತ್ಪನ್ನವಾಗಿ ಕಾಶೀಕ್ಷೇತ್ರದಿಂದ ಹೊರಟು ಉಜ್ಜಯಿನೀಪೀಠಕ್ಕೆ ಬಂದು ಶ್ರೀಭಗವತ್ಪಾದರ ದರ್ಶನದಿಂದ ಧನ್ಯರಾದೆವು. ಆಗ ನಾವು ವ್ಯಾಕರಣ ಸಾಹಿತ್ಯಮಾತ್ರ ಅಧ್ಯಯನಮಾಡಿದ್ದೆವು. ಅವರು ನಮ್ಮ ಮೇಲಿರುವ ನಿರತಿಶಯ ಪ್ರೇಮವಶಾತ್ ಯೋಗಾಭ್ಯಾಸವನ್ನು ಮಾಡಿಸಿದರು. ಶ್ರೀಭಗವತ್ಪಾದರ ಪ್ರತಿನಿತ್ಯದ ಯೋಗಸಾಧನಕಾಲದಲ್ಲಿ ಯೋಗಾಭ್ಯಾಸವನ್ನೂ ಶಿವಪೂಜಾಕಾಲದಲ್ಲಿ ಸನ್ನಿಧಿಯಲ್ಲಿಯೇ ನಿವಾಸವನ್ನೂ ಮಾಡಿಕೊಂಡು ಶ್ರೀಪಾದಪೂಜೆಯನ್ನು ಮಾಡಿಕೊಳ್ಳುತ್ತ ಶ್ರೀಪಾದತೀರ್ಥ ಪ್ರಸಾದ ಸೇವನೆಯಿಂದ ಪುನೀತರಾದೆವು. ಆಗ ಶ್ರೀಮಹಾಸನ್ನಿಧಿಯಲ್ಲಿ ನಮಗೆ ಪ್ರವಚನಮಾಡುವ ಸುಯೋಗವೂ ಲಭಿಸಿತು. ಶ್ರೀಜಗದಾಚಾರ್ಯರು ಪ್ರಸನ್ನರಾಗಿ ಸ್ವಸಂತೋಷದಿಂದ 'ಶಿವಸಿದ್ಧಾಂತತತ್ವಜ್ಞ' ರೆಂಬ ಪ್ರಶಸ್ತಿಯನ್ನು ಪ್ರದಾನಮಾಡಿದರು. ಶ್ರೀಭಗವತ್ಪಾದರ ಉಪದೇಶಾನುಸಾರವಾಗಿಯೇ ಪುನಃ ಕಾಶಿಗೆ ಹೋಗಿ ನ್ಯಾಯವೈಶೇಷಿಕಾದಿ

ದರ್ಶನಶಾಸ್ತ್ರಗಳನ್ನು ಅಧ್ಯಯನಮಾಡಿದೆವು. ನಾವು ಒಂದುಸಾರೆ ಅತಿಸಾರರೋಗದಿಂದ ಪೀಡಿತರಾದಕಾಲದಲ್ಲಿ ಶ್ರೀಭಗವತ್ಪಾದರು ತಮ್ಮ ಸನ್ನಿಧಿಗೆ ಕರೆಯಿಸಿಕೊಂಡು ಉಜ್ಜಯಿನೀಪೀಠದಲ್ಲಿ ಔಷಧೋಪಚಾರವನ್ನುಮಾಡಿಸಿ ನಮ್ಮನ್ನು ಪೋಷಣಮಾಡಿದರು.

ಶ್ರೀ ಜಗದಾಚಾರ್ಯ ಮಹಾತ್ಮರ ಕೃಪಾಪಾತ್ರರಾದ ನಾವು ೧೯೩೨ ನೆಯ ಇಸವಿಯಲ್ಲಿ ಅಕಸ್ಮಾತ್ ಶ್ರೀ ಹಿಮವತ್ಕೇದಾರ ಜಗದ್ಗುರು ನೀಲಕಂಠಲಿಂಗಶಿವಾಚಾರ್ಯಮಹಾಸ್ವಾಮಿಗಳಿಂದ ಉಷಾಮಠದಲ್ಲಿ ಶ್ರೀ ಏಕೋರಾಮಪೀಠದ ಉತ್ತರಾಧಿಕಾರಕ್ಕೋಸ್ಕರ ಪಟ್ಟಾಭಿಷಿಕ್ತರಾದೆವು. ತದನಂತರ ದಕ್ಷಿಣಭಾರತದ ಸಂಚಾರಕ್ಕಾಗಿ ಬಂದಾಗ್ಗೆ ಸೊಲ್ಲಾಪೂರ ನಗರದಲ್ಲಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರ ಸಂದರ್ಶನವಾಯಿತು. ಶ್ರೀಭಗವತ್ಪಾದರು ನಮ್ಮನ್ನು ಪೀಠದ ಗೌರವದಿಂದಲೇ ಸನ್ಮಾನಾದರದೃಷ್ಟಿಯಿಂದ ಕಂಡರು.



# ಸನಾತನ ಧರ್ಮಪಾಲನೆಗೋಸ್ಕರ ಸಂಚಾರ



ಶ್ರೀಮದುಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರು ಮಹಾಸಂಸ್ಥಾನದ ಪೂರ್ವಪದ್ಧತಿಯಂತೆ ಪಲ್ಲಕ್ಕಿ ಮೇಣಾ ಪಂಚಕಲಶ ಶ್ವೇತಚ್ಛತ್ರ ನಂದಿಧ್ವಜ ಮೊದಲಾದ ೭೨ ಬಿರುದಾವಲಿಯೊಡನೆ ಸನಾತನ ಶಿವಧರ್ಮಪಾಲನಕ್ಕೋಸ್ಕರ ವಿಶಾಲ ಭಾರತದಲ್ಲಿ ಸಂಚಾರಮಾಡತೊಡಗಿದರು.

## ನೈಜಾಂ ಸರಕಾರದಿಂದ ರಹದಾರಿ

ಶ್ರೀಜಗದ್ಗುರುಗಳ ಪ್ರಥಮ ಮಹೋತ್ಸವವು ಪದ್ಧತಿಯಂತೆ ಉಜ್ಜಯಿನಿ ಮತ್ತು ಕೊಟ್ಟೂರು ನಗರಗಳಲ್ಲಿ ನಡೆಯಿತು. ನೈಜಾಮ ಸರಕಾರದವರು ಹೈದರಾಬಾದ ಸ್ಟೇಟಿನಲ್ಲಿ ಜಗದ್ಗುರುಗಳಿಗೆ ಮಹಾ ಸಂಸ್ಥಾನದ ಪರಂಪರಾಮರ್ಯಾದೆಯಂತೆ ಅಡ್ಡಪಲ್ಲಕ್ಕಿ ಪಂಚಕಲಶ ಶ್ವೇತಚ್ಛತ್ರ ನಂದಿಧ್ವಜ ಹಗಲು ದೀವಟಿಗೆ ಮೊದಲಾದ (೭೨) ಬಿರುದಾವಲಿಯೊಡನೆ ಸಂಚರಿಸುವದಕ್ಕೋಸ್ಕರ ಘನವಾದ ರಹದಾರಿ ಯನ್ನು ಪ್ರದಾನಮಾಡಿದರು. ಆ ರಹದಾರಿಯಮೇರೆಗೆ ಹುಮನಾಬಾದ ಸುರಪುರ, ರಾಯಚೂರು, ಯಾದಗಿರಿ, ಮಹಾಗಾಂವ ಮುಂತಾದ ನಗರ ಗ್ರಾಮಗಳಲ್ಲಿ ಸಂಚರಿಸುತ್ತ ಸುಪ್ರಸಿದ್ಧವಾದ ಗುಲಬರ್ಗ ಮಹಾ ನಗರಕ್ಕೆ ೧೯೧೨ ನೆ ಇಸವಿಯಲ್ಲಿ ಬಿಜಯಂಗೈಸಿದರು.

## ಗುಲ್ಬರ್ಗಾದಲ್ಲಿ ಅಡ್ಡಪಲ್ಲಕ್ಕಿಮಹೋತ್ಸವ

ಗುಲಬರ್ಗಾ ನಗರದಲ್ಲಿ ಶ್ರೀ ಶರಣಬಸವೇಶ್ವರನೆಂಬ ಮಹಾ ತ್ಮನ ಮಂದಿರವಿದ್ದು ಆ ಶರಣಬಸವೇಶ್ವರ ಸಂಸ್ಥಾನಾಧೀಶ್ವರ ಶ್ರೀ

ದೊಡ್ಡಪ್ಪ ಅಪ್ಪಾ ಮಹಾರಾಜರು ಮಹಾಸಂಸ್ಥಾನದ ಸಕಲ ಬಿರುದಾವಲಿಯೊಡನೆ ನೈಜಾಂ ಸರಕಾರದ ರಹದಾರಿಯಂತೆ ಪುರದಲ್ಲಿ ಜಗದ್ಗುರುಗಳವರನ್ನು ಅಡ್ಡಪಲ್ಲಕ್ಕಿ ಶ್ವೇತಚ್ಛತ್ರ, ನಂದಿ ಧ್ವಜ, ಪಂಚಕಲಶ, ಪ್ರಭೃತಿ ಬಿರುದಾವಲಿಸಹಿತವಾಗಿ ಲಕ್ಷಾಂತರ ವೀರಶೈವ ಮಹಾಜನಸ್ತೋಮ ಮಧ್ಯದಲ್ಲಿ ರಾರಾಜಿಸುವ ಮಹೋತ್ಸವ ಪೂರ್ವಕ ಸ್ವಾಗತ ಮಾಡಿದರು. ಶರಣಬಸವೇಶ್ವರ ಮಹಾಸಂಸ್ಥಾನ ದಲ್ಲಿ ಜಗದ್ಗುರುಗಳು ನಿವಾಸಮಾಡಿ ಮಹಾಶಿವಪೂಜಾಲೋಲರಾಗಿ ಆ ಪ್ರಾಂತದ ಸಮಸ್ತ ವೀರಶೈವ ಮಹಾಮತೀಯರಿಗೆ ಧರ್ಮೋಪ ದೇಶವನ್ನು ಮಾಡುತ್ತ ಶಿವಭಕ್ತಿಯನ್ನು ಪ್ರಚಾರಮಾಡಿದರು. ಶ್ರೀಜಗದ್ಗುರುಗಳು ಈ ಶರಣರ ಮೇಲೆ ಅನಿತರಸಾಧಾರಣ ಪ್ರೇಮ ವಿಶ್ವಾಸಯುಕ್ತರಾಗಿದ್ದರು. ಶ್ರೀ ದೊಡ್ಡಪ್ಪ ಅಪ್ಪ ಮಹಾಶರಣರು ಶ್ರೀಜಗದ್ಗುರುಗಳ ವಿಷಯದಲ್ಲಿ ಅದ್ಯಾಪಿ ನಿರತಿಶಯ ಭಕ್ತಿಶ್ರದ್ಧಾ ಯುತರಾಗಿದ್ದು ಸಕಲೈಶ್ವರ್ಯಸಂಪನ್ನ ಸಾಧುಪುರುಷರಾಗಿರುತ್ತಾರೆ. ಜಗದ್ಗುರುಗಳು ಶ್ರೀ ಶರಣಬಸವೇಶ್ವರ ದೇವಸ್ಥಾನದ ಕ್ರಿಯಾಮೂರ್ತಿ ಗಳಾದ ಶ್ರೀಸಿದ್ಧಲಿಂಗದೇಶಿಕರಿಗೆ ಮುಗಳನಾಗಾಯಿ ಹಿರಿಯಮಠದ ಪಟ್ಟಾಧಿಕಾರ ಪ್ರದಾನಮಾಡಿದರು. ಪಟ್ಟಾಭಿಷಿಕ್ತ ಶ್ರೀಸಿದ್ಧಲಿಂಗ ಶಿವಾಚಾರ್ಯರು ಸಿದ್ಧಪುರುಷರಾಗಿ ವಿಖ್ಯಾತರಾದರು.

## ಕಾಶಿಯಲ್ಲಿ ಪಂಚಾಚಾರ್ಯ ಮಹಾಸಮ್ಮೇಲನ

ಉತ್ತರಭಾರತದ ಶ್ರೀ ಕಾಶೀಕ್ಷೇತ್ರದಲ್ಲಿ—೧೯೧೮ ನೆಯ ಇಸವಿ ಯಲ್ಲಿ ಶ್ರೀಜಗದ್ಗುರು ಪಂಚಾಚಾರ್ಯ ಮಹಾಸಮ್ಮೇಲನಕ್ಕೋಸ್ಕರ ಶ್ರೀಕಾಶೀಜಗದ್ಗುರು ಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳನ್ನೂ ಶ್ರೀರಂಭಾಪುರೀ, ಶ್ರೀಶೈಲ ಪೀಠಾಧೀಶ್ವರರನ್ನೂ ಬರಮಾಡಿಕೊಂಡು

ಕಾಶೀವಿಶ್ವಾರಾಧ್ಯ ಮಹಾಸಂಸ್ಥಾನದ ಅಡ್ಡಪಲ್ಲಕ್ಕಿ ಪಂಚಕಲಶ ನಂದಿಧ್ವಜ ಪ್ರಭೃತಿ ಸಕಲ ಬಿರುದಾವಲಿಯೊಡನೆ ಸ್ವಾಗತಿಸಿದರು. ಆ ಮಹೋತ್ಸವಕ್ಕೋಸ್ಕರ ದಕ್ಷಿಣಭಾರತದಿಂದ ಲಕ್ಷಾಂತರ ವೀರಶೈವಮಹಾಜನರು ಆಗಮನಮಾಡಿದ್ದರು. ಲಕ್ಷಾಂತರ ಸನಾತನ ಧರ್ಮಾವಲಂಬಿಗಳಿಂದ ವಿರಾಜಿಸುವ ಕಾಶೀ ಮಹಾಕ್ಷೇತ್ರದ ಪುರ ವೀಥಿಗಳಲ್ಲಿ ಅಭೂತಪೂರ್ವವಾದ ಅಡ್ಡಪಲ್ಲಕ್ಕಿ ಮಹೋತ್ಸವವು ನಡಿಯಿತು.

ಈ ಪ್ರಕಾರ ಸಕಲ ವೈಭವದಿಂದ ಆಗಮಿಸಿದ ಉಜ್ಜಯಿನಿ ಜಗದ್ಗುರು ಶ್ರೀ ಸಿದ್ಧಲಿಂಗಶಿವಾಚಾರ್ಯರು ರಂಭಾಪುರಿ ಜಗದ್ಗುರು ಶ್ರೀ ಪಂಚಾಕ್ಷರಶಿವಾಚಾರ್ಯರು ಶ್ರೀಶೈಲ ಜಗದ್ಗುರು ಶ್ರೀನಾಗ ಲೋಟಿ ಭಿಕ್ಷಾವೃತ್ತಿಶಿವಾಚಾರ್ಯರು ಸಮ್ಮಿಲಿತರಾಗಿ ಕಾಶೀಜಗದ್ಗುರು ಶ್ರೀ ಶಿವಲಿಂಗಶಿವಾಚಾರ್ಯಭಗವತ್ಪಾದರ ಅತಿಥಿಗಳಾಗಿ ಜಂಗಮವಾಡಿ ಮಠದಲ್ಲಿ ನಿವಾಸಮಾಡಿದರು. ಕೇದಾರ ಜಗದ್ಗುರು ಶ್ರೀ ವಿಶ್ವಲಿಂಗ ಶಿವಾಚಾರ್ಯರಿಗೆ ದೇಹಾಲಸ್ಯವಿದ್ದ ಮೂಲಕ ಆಗಮಿಸದೆ ಸದ್ಯಃ ನಡೆಯಲಿರುವ ಪಂಚಾಚಾರ್ಯ ಮಹಾಸಮ್ಮೇಲನಕ್ಕೆ ಶುಭಾಶಯ ಗಳನ್ನು ಕೋರಿ ಚತುರಾಚಾರ್ಯರಿಂದ ಪಾಸಾದ ಠರಾವುಗಳಿಗೆ ತಮ್ಮ ಒಪ್ಪಿಗೆ ಇರುವುದಾಗಿ ಲಿಖಿತಮೂಲಕ ತಿಳಿಸಿದರು. ತಾ॥ ೨೦-೩-೧೯೧೮ ನೇ ಇಸ್ವಿ ದಿವಸ ಚತುಷ್ಪೀಠಾಧೀಶ್ವರರ ಸನ್ನಿಧಿ ಯಲ್ಲಿ ಸಭೆ ನಡೆಯಿತು. ವೀರಶೈವಮತದ ಪಂಚಪೀಠಗಳ ಹಾಗು ಗುರುವರ್ಗದ ಅಭಿವೃದ್ಧಿಗಾಗಿ ಅನೇಕ ವಿಷಯಗಳು ಚರ್ಚಿಸಲ್ಪಟ್ಟು ಕೆಳಕಂಡ ಠರಾವುಗಳು ಪಾಸಾದವು.

ಠರಾವುಗಳು—

೧. ಪ್ರತ್ತೀಕ ನಗರ-ಗ್ರಾಮಗಳಲ್ಲಿ ನಡೆಯತಕ್ಕ ಲಿಂಗಧಾರಣ, ದೀಕ್ಷಾ, ವಿವಾಹಾದಿ ಕಾರ್ಯಗಳನ್ನು ಸಶಾಸ್ತ್ರವಾಗಿ ಶ್ರೀಮಜ್ಜಗದ್ಗುರು

ಪಂಚಾಚಾರ್ಯರ ಸಾಕ್ಷಿಭೂತಗಳಾದ ಪಂಚಕಲಶಗಳ ಸ್ಥಾಪನ ಪೂರ್ವಕ ಎಲ್ಲಾ ಕಾರ್ಯಗಳನ್ನು ನಡೆಯಿಸುವದಕ್ಕಾಗಿ ತಮ್ಮ ಶಿಷ್ಯರಾದ ಮಠಾಚಾರ್ಯ, ಗಣಾಚಾರ್ಯ, ಮಠಪತ್ತಿ, ಕುಮಾರ, ಸ್ಥಾವರರೆಂಬ ಐದುಮಂದಿ ಉಪಾಚಾರ್ಯರನ್ನು ನೇಮಿಸಿರುವರು. ಪಂಚ ಉಪಾಚಾರ್ಯರು ಲಿಂಗಧಾರಣ, ದೀಕ್ಷಾ, ವಿವಾಹ ಮೊದಲಾದ ಕಾರ್ಯಗಳಲ್ಲಿ ಪಂಚಕಲಶಗಳನ್ನು ಸ್ಥಾಪಿಸಿ ಯಜಮಾನನ ಯೋಗ್ಯತಾನುಸಾರವಾಗಿ ಕಾಣಿಕೆಗಳನ್ನು ಇಡಿಸಿ, ಅದರಲ್ಲಿ ಮೂರುಭಾಗ ಗಳನ್ನು ಮಾಡಿ ಒಂದು ಭಾಗವನ್ನು ಐದುಮಂದಿ ಉಪಾಚಾರ್ಯರು ತೆಗೆದುಕೊಂಡು, ಎರಡು ಭಾಗಗಳನ್ನು ಮಹಾಚಾರ್ಯರಿಗೆ ಕಳುಹಿಸಿ ಕೊಡತಕ್ಕದ್ದು. ಮತ್ತು ವಿವಾಹ, ದೀಕ್ಷಾ ಕಾರ್ಯಗಳಲ್ಲಿ ಶ್ರೀಮಜ್ಜಗದ್ಗುರು ಪಂಚಾಚಾರ್ಯರ ಸಮ್ಮೇಲನ ಸ್ಮಾರಕವಾಗಿ ಕಾಶಿಯಲ್ಲಿ ಸ್ಥಾಪಿತವಾದ ಗುರುಕುಲಕ್ಕೆ ಯಜಮಾನನ ಯೋಗ್ಯತಾನುಸಾರ ವಾಗಿ ದ್ರವ್ಯವನ್ನು ಒಪ್ಪಿಸತಕ್ಕದ್ದು. ಉಪಾಚಾರ್ಯರ ಕರ್ತವ್ಯ ಕರ್ಮದ ಬಗ್ಗೆ ಮುಂದಿನ ಮಹಾಸಭೆಯಲ್ಲಿ ನಿರ್ಣಯಿಸಲ್ಪಡುವದು.

೨. ಶ್ರೀಮಜ್ಜಗದ್ಗುರು ಪಂಚಾಚಾರ್ಯರಿಂದ ಪಟ್ಟಚರ ಮೂರ್ತಿಗಳಿಗೆ ಆಯಾಯ ಗ್ರಾಮಗಳ ಧರ್ಮಸಂಬಂಧಿ ಸೂಕ್ಷ್ಮ ನ್ಯಾಯಗಳನ್ನು ತೀರಿಸುವದಕ್ಕೋಸ್ಕರ ವಿಶೇಷ ಅಧಿಕಾರವು ಧರ್ಮ ಶಾಸ್ತ್ರಜ್ಞರಾದವರಿಗೆ ಕೊಡತಕ್ಕದ್ದು ಎಂದು ನಿರ್ಣಯಿಸಲ್ಪಟ್ಟಿರುತ್ತದೆ. ವಿಶೇಷ ಹುಕುಮನ್ನು ಪಡೆದ ಪಟ್ಟಚರಮೂರ್ತಿಗಳು ಆಯಾ ಗ್ರಾಮದ ಪ್ರಮುಖರಾದ ಶೆಟ್ಟಿ ಮೊದಲಾದ ಪಂಚರಿಂದ ಕೂಡಿ ನ್ಯಾಯಗಳನ್ನು ವಿಚಾರಿಸಿ ಆ ವಿಚಾರಣೆಯ ಒಂದು ರಿಕಾರ್ಡನ್ನು ತಮ್ಮ ಹತ್ತರ ಇಟ್ಟುಕೊಂಡು, ನ್ಯಾಯದ ತೀರ್ಮಾನುಗಳನ್ನು ಪಂಚಸಿಂಹಾಸನಾಧಿ ಪತಿಗಳಿಗೆ ಕಳುಹಿಸಿಕೊಡಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೆ.

೩. ಶೆಟ್ಟಿ ಮೊದಲಾದ ಪಂಚರಿಗೆ ಅಧಿಕಾರವನ್ನು ಪೂರ್ವ

ಸಾಂಪ್ರದಾಯಕ್ಕನುಸರಿಸಿ ವಿಚಾರಪೂರ್ವಕ ಕೊಡತಕ್ಕದ್ದೆಂದು ನಿರ್ಧರಿಸಲ್ಪಟ್ಟಿರುತ್ತದೆ. ಗುರುಸ್ಥಲ ವಂಶೋದ್ಭವರಾದ ಧರ್ಮಶಾಸ್ತ್ರವನ್ನು ಬಲ್ಲಂಥ ಹಾಗೂ ಶಿಷ್ಯರನ್ನು ಸರ್ವರೀತಿಯಿಂದ ರಕ್ಷಣೆಮಾಡಲು ಸಮರ್ಥರಿದ್ದಂಥ ವಟುಗಳಿಗೆ ಆಯಾಯ ಮಠಗಳ ರೂಢಿಗನುಸರಿಸಿ ತತ್ತಚ್ಛಾಖೆಯ ಸಿಂಹಾಸನಾಧಿಪತಿಗಳ ಅಪ್ಪಣೆಯಮೇರೆಗೆ ಪಟ್ಟಚರಾಧಿಕಾರಗಳನ್ನು ಕೊಡತಕ್ಕದ್ದೆಂದು ನಿರ್ಧರಿಸಲ್ಪಟ್ಟಿರುತ್ತದೆ.

೪. ಯಾವದೊಂದು ಅಧಿಕಾರವಿಲ್ಲದೆ ಸಿಂಹಾಸನದ ಹೆಸರು ಹೇಳಿ ಸಂಚರಿಸುವ ಡಾಂಭಿಕರನ್ನೂ ಮತ್ತು ಶಿಷ್ಯರನ್ನು ಮೋಸಮಾಡಿ ಹಣ ವಸೂಲುಮಾಡುತ್ತಿರುವವರನ್ನೂ ನಿರ್ಬಂಧಿಸಬೇಕೆಂದು ಠರಾಯಿಸಿರುತ್ತದೆ.

೫. ನಮ್ಮ ಸಮಾಜದ ಶಿಷ್ಯಮಂಡಲಿಯಲ್ಲಿ ಅನೇಕ ಪಂಗಡಗಳಿದ್ದು ತಮ್ಮತಮ್ಮೊಳಗೆ ವೈರಭಾವಗಳನ್ನುಂಟುಮಾಡಿಕೊಳ್ಳದೆ ಸರ್ವರೂ ಸಹೋದರಭಾವದಿಂದ ವರ್ತಿಸಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೆ.

೬. ಪಂಚಾಚಾರ್ಯರ ಹೆಸರಿನಿಂದ ಸ್ಥಾಪಿಸಲ್ಪಡುವ ಫಂಡಿನ ವಿಷಯವಾಗಿಯೂ ಅದರ ನಿಬಂಧನ ವಿಷಯವಾಗಿಯೂ ಮುಂದಿನ ಮಹಾಸಭೆಯಲ್ಲಿ ನಿರ್ಧರಿಸಲ್ಪಡುತ್ತದೆ.

೭. ಶ್ರೀಕ್ಷೇತ್ರ ಕಾಶಿಯಲ್ಲಿ ಸ್ಥಾಪಿಸಲ್ಪಟ್ಟ ಹಿಂದೂ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ-ಇಂಗ್ಲೀಷ ಮೊದಲಾದ ಅಭ್ಯಾಸಮಾಡತಕ್ಕ ವೀರಶೈವ ವಿದ್ಯಾರ್ಥಿಗಳಿಗೆ ವಿದ್ಯಾ ಧರ್ಮೋನ್ನತಿಗಾಗಿ ಶ್ರೀ ಕಾಶಿಯಲ್ಲಿ ಜಗದ್ಗುರು ಪಂಚಾಚಾರ್ಯ ಸಮ್ಮೇಲನ ಸ್ಮಾರಕ "ಗುರುಕುಲ" ಸ್ಥಾಪಿಸಲ್ಪಟ್ಟಿರುತ್ತದೆ. ಅದಕ್ಕೆ ಸರ್ವರೂ ಸಹಾಯ ಮಾಡಬೇಕೆಂದು ನಿರ್ಧರಿಸಿರುತ್ತದೆ.

೮. ಈವರ್ಷ ನೆರವೇರಿದ ಶ್ರೀಮಜ್ಜಗದ್ಗುರು ಪಂಚಾಚಾರ್ಯ ಈ ಮಹಾಸಭೆಯಲ್ಲಿ ಈ ಮತದ ಪಂಡಿತರ ಯೋಗ್ಯತಾನುಸಾರವಾಗಿ ಪದವಿಗಳನ್ನು ಕೊಟ್ಟಂತೆ ಮುಂದಿನ ಮಹಾಸಭೆಯಲ್ಲಾದರೂ ಕೊಡತಕ್ಕದ್ದೆಂದು ನಿರ್ಧರಿಸಿರುತ್ತದೆ.

೯. ಶ್ರೀಮಜ್ಜಗದ್ಗುರು ಪಂಚಾಚಾರ್ಯ ಮಹಾಸಭೆಯು ಪ್ರತಿವರುಷ ಅವಿಚ್ಛಿನ್ನವಾಗಿ ನಡೆಯುವ ವ್ಯವಸ್ಥೆಯ ಬಗ್ಗೆ ಮುಂದಿನ ಮಹಾಸಭೆಯಲ್ಲಿ ನಿರ್ಣಯಿಸಲ್ಪಡುವದು.

೧೦. ವೀರಶೈವ ಮತದ ಗ್ರಂಥಾಲಯಗಳನ್ನು ಪಂಚಪೀಠಗಳಲ್ಲಿ ಸ್ಥಾಪಿಸಿ ಒಂದೊಂದು ಗ್ರಂಥಾಲಯದಲ್ಲಿ ಇಬ್ಬರು ಪಂಡಿತರನ್ನು ಗ್ರಂಥಶೋಧನ ಕಾರ್ಯಕ್ಕೆ ನಿಯಮಿಸಬೇಕೆಂದು ನಿರ್ಧರಿಸಿರುತ್ತವೆ.

೧೧. ಕಾಶೀಕ್ಷೇತ್ರದಲ್ಲಿ ಶ್ರೀಮಜ್ಜಗದ್ಗುರು ಪಂಚಾಚಾರ್ಯ ಮುದ್ರಣಾಲಯವನ್ನು ಸ್ಥಾಪಿಸಬೇಕೆಂದು ನಿರ್ಧರಿಸಲ್ಪಟ್ಟಿರುತ್ತದೆ.

೧೨. ಪಂಚಾಚಾರ್ಯ ಪೀಠಗಳಲ್ಲಿ ಪಟ್ಟಚರಾಧಿಕಾರಿಗಳು ಪೂರ್ವಸಾಂಪ್ರದಾಯದಿಂದ ನಡೆದುಬಂದಿರುತ್ತವೆ. ಈ ಕಾಲದಲ್ಲಿ ಉಭಯ ಅಧಿಕಾರಿಗಳೂ ಕೂಡಿ ಇದ್ದರೆ ಪರಸ್ಪರ ಸಹಾನುಭೂತಿಯಿಂದ ಇರುವದಿಲ್ಲಾದಕಾರಣ ಒಬ್ಬರೇ ಅಧಿಕಾರಿಗಳು ಇರತಕ್ಕದ್ದೆಂದು ನಿರ್ಧರಿಸಿರುತ್ತದೆ.

೧೩. ದೇಶಕಾಲಾನುಗುಣವಾಗಿ ಕೆಲಕೆಲವು ನಿಯಮಗಳನ್ನು ಹೆಚ್ಚುಕಡಿಮೆ ಮಾಡಿ ಸುಧಾರಿಸುವದರಲ್ಲಿ ಬರುವದೆಂದು ನಿರ್ಧರಿಸಲ್ಪಟ್ಟಿರುತ್ತದೆ.

ತಾ॥ ೨೧-೩-೧೯೧೮

ಈ ಠರಾವುಗಳು ಶ್ರೀಕೇದಾರಪೀಠದ ಜಗದ್ಗುರುಗಳ ಅವಗಾಹನೆಗೆ ಕಳಿಸಲ್ಪಟ್ಟು ಶ್ರೀಜಗದ್ಗುರು ಪಂಚಾಚಾರ್ಯರ ಸಹಿ ಮೊಹರುಗಳೊಡನೆ ಮುದ್ರಿಸಿ, ಪ್ರಸಿದ್ಧಮಾಡಲ್ಪಟ್ಟಿವೆ.

## ಬಳ್ಳಾರಿಯಲ್ಲಿ ಅಷ್ಟಪಲ್ಲಕ್ಕಿಮಹೋತ್ಸವ

ಕರ್ಣಾಟಕದಲ್ಲಿ ಇತಿಹಾಸಪ್ರಸಿದ್ಧವಾದ ಬಳ್ಳಾರಿ ನಗರದ ವೀರಶೈವ ಮಹಾಜನರು ೧೨-೧೨-೧೯೩೦ ನೆ ಇಸವಿಯಲ್ಲಿ ಬಳ್ಳಾರಿ ಜಿಲ್ಲಾ ಕಲೆಕ್ಟರ ಸಾಹೇಬರ ರಹದಾರಿಯ ಮೇರೆಗೆ ಬಳ್ಳಾರಿ ಪುರವನ್ನು ರಂಭಾಸ್ತಂಭ ತಳಿರುತೋರಣ ನಾನಾ ವರ್ಣರಂಜಿತ ಪತಾಕೆಗಳಿಂದ ಶೃಂಗರಿಸಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳನ್ನು ಸುವರ್ಣರಜತ ಅಷ್ಟಪಲ್ಲಕ್ಕಿಯಲ್ಲಿ ಮೂರ್ತ ಗೊಳಿಸಿ ಪಂಚಕಲಶ ಶ್ವೇತಚ್ಛತ್ರ ನಂದಿಧ್ವಜ ಮೊದಲಾದ ೭೨ ಬಿರುದಾವಲಿಸಮೇತವಾಗಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮೀಜೀಕೀ ಜೈ ಎಂಬ ಲಕ್ಷೋಪಲಕ್ಷ ಮಹಾಜನದ ಜಯಘೋಷ, ಹಾಗು ನಾನಾ ವಾದ್ಯವೈಭವದ ಸುಮಂಗಲೆಯರ ಆರತಿ ಹಣ್ಣು ಕಾಯಿ ಕಪ್ಪುರ ಅರ್ಚನಾದಿ ಸತ್ಕಾರದೊಡನೆ ಅಭೂತ ಪೂರ್ವವಾದ ಮಹೋತ್ಸವವನ್ನು ನಡಿಸಿ ಧನ್ಯರಾದರು.

## ಬಾರ್ಶಿನಗರಕ್ಕೆ ಜಗದ್ಗುರುಗಳವರ ಶುಭಾಗಮನ

ಯಾವ ಮಹಿಮನ ತಪಃಪ್ರಭಾವದಿಂದ ಶೈಥಿಲ್ಯಾವಸ್ಥೆಯನ್ನು ಹೊಂದಿದ್ದ ವೀರಶೈವ ಸಮಾಜವು ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಿರುವುದೋ, ಯಾವ ಪೂಜ್ಯಪಾದರ ಅನುಗ್ರಹಬಲದಿಂದ ಗುರುವರ್ಗವು ತನ್ನ ಕರ್ತವ್ಯಕರ್ಮದಲ್ಲಿ ತೊಡಗಿರುವುದೋ, ಯಾವ ಗುರುವರ್ಯರ ಪ್ರಯತ್ನವಿಶೇಷದಿಂದ ಮತಸ್ಥಾಪನಾಚಾರ್ಯರ ಧರ್ಮ ಪೀಠಗಳು ಜಗತ್ತಿನಲ್ಲಿ ಜಾಜ್ವಲ್ಯಮಾನಗಳಾದವೋ, ಆ ಶ್ರೀಮದುಜ್ಜ ಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಸಿದ್ಧ ಲಿಂಗಶಿವಾಚಾರ್ಯಮಹಾಸ್ವಾಮಿಗಳವರ ಸವಾರಿಯು ಮಹಾರಾಷ್ಟ್ರ ದೇಶಕ್ಕೆ ಬಿಜಯಂಗೈಸಿದುದನ್ನು ನೋಡಿದರೆ ಮಹಾರಾಷ್ಟ್ರದೇಶದ



ಬಳ್ಳಾರಿಯಲ್ಲಿ ನಡೆದ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಅಡ್ಡಪಲ್ಲಕ್ಕಿಮಹೋತ್ಸವ.



ಸೊಲ್ಲಾಪುರ ಸಿಟಿಯಲ್ಲಿ ನೆರವೇರಿದ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರ
ಅಡ್ಡಪಲ್ಲಕ್ಕಿಮಹೋತ್ಸವದ ದೃಶ್ಯ!

ವೀರಶೈವರ ಪುಣ್ಯಕ್ಕೆ ಎಣೆಯಿಲ್ಲವೆಂದು ಹೇಳಬೇಕಾಗಿದೆ. ಮಹಾಸನ್ನಿಧಿಯವರ ಈ ಮಹೋತ್ಸವದಲ್ಲಿ ಸ್ಮಾರ್ತ. ವೈಷ್ಣವ, ಮಹಮ್ಮದೀಯ, ಜೈನ, ವಿಶ್ವಕರ್ಮ, ವೈಶ್ಯ, ಮರಾಠಾ, ಸಿಂಪಿ ಮೊದಲಾದ ಜನಾಂಗದವರು ಸ್ವಮತಾಭಿಮಾನವನ್ನು ದೂರೀಕರಿಸಿ ನಿರ್ಮಲಾಂತಃಕರಣದಿಂದ ಭಾಗಿಗಳಾದರು, ಹೀಗಾಗುವುದಕ್ಕೆ ಶ್ರೀಜಗದ್ಗುರುಗಳವರ ತಪಃಪ್ರಭಾವವೇ ಮೂಲಕಾರಣವೆಂದು ಹೇಳಬೇಕಾಗುತ್ತದೆ. ಬಾರ್ಸಿಪಟ್ಟಣವು ಸೊಲ್ಲಾಪುರ ಡಿಸ್ಟ್ರಿಕ್ಟಿಗೆ ಶೇರಿದ್ದು ತಾಲೂಕಿನ ಮುಖ್ಯಸ್ಥಳವಾಗಿರುವುದು. ಇಲ್ಲಿ ವೀರಶೈವರ ಜನಸಂಖ್ಯೆಯು ಸುಮಾರು ೧೦ ಸಾವಿರವಿದ್ದು ಎಲ್ಲಾ ತರಹದ ಆಡಳಿತಗಳು ಇವರ ಸ್ವಾಧೀನದಲ್ಲಿಯೇ ಇರುವುವು. ಇಲ್ಲಿ ಮ|| ರಾ|| ಅಣ್ಣಾಸಾಹೇಬ ಕಥಲೆ ಎಂಬವರು ಪ್ರಮುಖರಾಗಿದ್ದು ಇವರು ಎಲ್ಲಾ ಜನಾಂಗದವರ ಪ್ರೇಮಕ್ಕೆ ಪಾತ್ರರಾಗಿದ್ದರು. ಇವರಲ್ಲಿರತಕ್ಕ ಗುರುಭಕ್ತಿಯು ವರ್ಣನಾತೀತವಾಗಿತ್ತು. ಆ ಕಾಲದಲ್ಲಿ ಇಂಥ ಗುರುಭಕ್ತರು ಈ ಪ್ರಪಂಚದಲ್ಲಿ ದೊರೆಯುವುದು ದುರ್ಲಭವೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಿಕ್ಕಿಲ್ಲ. ಈ ಸದ್ಭಕ್ತಶಿಖಾಮಣಿಗಳ ಅಸಾಧಾರಣ ಪ್ರಯತ್ನದಿಂದಲೇ ಶ್ರೀಜಗದ್ಗುರುಗಳವರ ಸವಾರಿಯು ಮಹಾರಾಷ್ಟ್ರದೇಶಕ್ಕೆ ಬಿಜಯಂಗೈಸಿತು. ಈ ಗುರುಸಾರ್ವಭೌಮರನ್ನು ಮಹಾರಾಷ್ಟ್ರದೇಶಕ್ಕೆ ದಯಮಾಡಿಸಿಕೊಂಡು ವೀರಶೈವ ಸಮಾಜವನ್ನುದ್ಧರಿಸಿದ ಪುಣ್ಯವು ಮ|| ರಾ|| ಅಣ್ಣಾಸಾಹೇಬರ ಪಾಲಿಗಿರುವುದೆಂದು ಅತ್ಯಾನಂದದಿಂದ ಹೇಳಬಹುದಾಗಿದೆ. ಮಹಾರಾಷ್ಟ್ರದೇಶದಲ್ಲಿ ೭ ಲಕ್ಷ ಜನ ವೀರಶೈವರಿರುವರು. ಆದಾಗ್ಗೂ ಅಂದಿನವರೆಗೂ ಒಬ್ಬ ಪೀಠಾಧಿಪತಿಗಳಾದರೂ ಆ ದೇಶಕ್ಕೆ ದಯಮಾಡಿಸಿರಲಿಲ್ಲ. ಈ ಪರಿಸ್ಥಿತಿಯನ್ನು ತಿಳಿದೇ ಶ್ರೀಜಗದ್ಗುರುಗಳವರು ಆ ದೇಶಕ್ಕೆ ದಯಮಾಡಿಸಿದ್ದುದು ಮಹಾರಾಷ್ಟ್ರದೇಶದ ವೀರಶೈವರ ಪುಣ್ಯವಿಶೇಷವಾಗಿತ್ತು. ಶ್ರೀಜಗದ್ಗುರುಗಳವರು ಮಹಾರಾಷ್ಟ್ರದೇಶವಲ್ಲೆಲ್ಲಾ ಸಂಚರಿಸಿ ವೀರಶೈವ

ಸಮಾಜವನ್ನುದ್ಧರಿಸಬೇಕೆಂದು ಶ್ರೀ ರಾಚಲಿಂಗಸ್ವಾಮಿಗಳು ಪರಾಂಡಕರ ಮಠ, ಅಣ್ಣಾಸಾಹೇಬಕಥಲೆ ಮೊದಲಾದ ಮಠಾಭಿಮಾನಿಗಳು ವಿಶೇಷಪ್ರಯತ್ನಪಟ್ಟರು. ಬಾರ್ಸಿಪಟ್ಟಣದಲ್ಲಿರುವ ವೀರಶೈವ ಪ್ರಮುಖರಾದ ಕಥಲೆ, ಹಗರೆ, ಘೋಡಕೆ, ಜಾಡಮುಖೆ ಮೊದಲಾದವರು ಶ್ರೀಜಗದ್ಗುರುಗಳವರ ಸೇವೆಯನ್ನು ಮಾಡಿ ಧನ್ಯರಾದರು.

## ಸೊಲ್ಲಾಪುರದಲ್ಲಿ ಅಡ್ಡಪಲ್ಲಕ್ಕಿಮಹೋತ್ಸವ

ಶ್ರೀಮದ್ವೀರಶೈವಮಹಾಮತಸ್ಥಾಪನಾಚಾರ್ಯ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರ ಅಡ್ಡಪಲ್ಲಕ್ಕಿಮಹೋತ್ಸವವು ಕ್ರಿ.ಶ. ೧೯೩೩ ಜೂನ್ ೧೨ ನೇ ತಾರೀಖಿನ ದಿವಸ ಪಂಚಕಲಶ ಮೊದಲಾದ ೭೨ ಬಿರುದಾವಳಿಗಳೊಡನೆ ಸೊಲ್ಲಾಪುರ ಪಟ್ಟಣದಲ್ಲಿ ಅತ್ಯಂತವೈಭವದಿಂದ ನೆರವೇರಿತು. ಸೊಲ್ಲಾಪುರ ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರವರು ಶ್ರೀಜಗದ್ಗುರುಗಳವರ ಮಹೋತ್ಸವವು ೭೨ ಬಿರುದಾವಳಿಗಳೊಡನೆ ನಡೆಯುವಂತೆ ಆರ್ಡರ್ ಮಾಡಿದ್ದರು. ಡಿಸ್ಟ್ರಿಕ್ಟ್ ಮ್ಯಾಜಿಸ್ಟ್ರೇಟರವರ ಅಪ್ಪಣೆಯ ಮೇರೆಗೆ ಪೋಲೀಸ್ ಅಧಿಕಾರಿಗಳು ಪೋಲೀಸ್ ಪಾರ್ಟಿಯೊಡನೆ ಆಗಮಿಸಿ ಅತ್ಯಂತ ತೃಪ್ತಿಕರವಾದ ಏರ್ಪಾಟನ್ನಿಟ್ಟಿದ್ದರು. ಈ ಮಹೋತ್ಸವಕ್ಕಾಗಿ ಬೊಂಬಾಯಿಪ್ರಾಂತದ ನಾನಾ ಭಾಗಗಳಿಂದ ಅಸಂಖ್ಯಜನ ವೀರಶೈವರು ಆಗಮಿಸಿದ್ದರು. ಈ ಮಹೋತ್ಸವದಲ್ಲಿ ಒಟ್ಟು ೬೦-೭೦ ಸಾವಿರ ಜನರು ಭಾಗಿಗಳಾಗಿದ್ದರು. ಸಮುದ್ರವು ಜಲಸಮೂಹದಿಂದ ಪಾರಾವಾರವಾಗಿರುವಂತೆ ಈ ಮಹೋತ್ಸವವು ಜನಸಮೂಹದಿಂದ ಪಾರಾವಾರವಾಗಿತ್ತು. ಈ ರೀತಿಯಾಗಿದ್ದ ಜನಸ್ತೋಮದ ಮಧ್ಯದಲ್ಲಿ ಶ್ರೀಜಗದ್ಗುರುಗಳವರು ಸುವರ್ಣರಜತಗಳಿಂದ ನಿರ್ಮಿತವಾಗಿದ್ದ ಸುಂದರವಾದ ಪಲ್ಲಕ್ಕಿಯಲ್ಲಿ ಮೂರ್ತಮಾಡಿದರು.

ಕೂಡಲೇ 'ಶ್ರೀ ಜಗದ್ಗುರು ಪಂಚಾಚಾರ್ಯ ಮಹಾರಾಜಕೀ ಜೈ' ಎಂಬ ಜಯಘೋಷವು ನಭೋಮಂಡಲವನ್ನು ವ್ಯಾಪಿಸಿತು. ಈ ಮಹೋತ್ಸವವು ೯ ಘಂಟೆಗೆ ಪ್ರಾರಂಭವಾಯಿತು. ಶ್ವೇತಚ್ಛತ್ರ, ನಂದಿಧ್ವಜ, ಮಕರತೋರಣ, ಹಗಲುದೀವಟಿಗೆ ಮೊದಲಾದ ಅಸಂಖ್ಯ ಬಿರುದುಗಳು ಉತ್ಸವಕ್ಕೆ ಘನತರವಾದ ಶೋಭೆಯನ್ನುಂಟುಮಾಡಿದ್ದವು. ನಾನಾತರಹದ ಮಂಗಲವಾದ್ಯಗಳು ಭೋರ್ಗರೆಯುತ್ತಿದ್ದುವು. ಭಜನಾಸಂಘದವರು ಮಂಜುಲಧ್ವನಿಯಿಂದ ಭಜನೆಯನ್ನು ಮಾಡುತ್ತ ಉತ್ಸವದ ಮುಂದೆ ಮುಂದೆ ಸಾಗುತ್ತಿದ್ದರು. ಚಿಕ್ಕಮಕ್ಕಳಾದಿಯಾಗಿ ಪ್ರತಿಯೊಬ್ಬರೂ "ಸಿದ್ಧಲಿಂಗೋವಿಜಯತೇ"ಎಂದು ಜಯಜಯಕಾರಗಳನ್ನು ಮಾಡುತ್ತಿದ್ದರು. ಸೊಲ್ಲಾಪುರದ ಪ್ರತಿಯೊಂದು ರಾಜಮಾರ್ಗಗಳೂ ಬಹುಮನೋಹರವಾಗಿ ಅಲಂಕರಿಸಲ್ಪಟ್ಟಿದ್ದವು. ಈ ರಾಜಮಾರ್ಗಗಳನ್ನು ಆಲಂಕರಿಸಿದ ರೀತಿಯನ್ನು ವರ್ಣಿಸಲು ಈ ಲೇಖನಿಯು ಎಂದೂ ಸಮರ್ಥವಾಗಲಾರದು. ಈ ಮಹೋತ್ಸವದ ವೈಭವವನ್ನು ಕಣ್ಣಾರೆಕಂಡ ಕಣ್ಣುಗಳೇ ಧನ್ಯ! ಈ ಉತ್ಸವದಲ್ಲಿ ಭಾಗಿಗಳಾಗಿದ್ದ ಮಾನವರ ಜನ್ಮವೇ ಸಾರ್ಥಕ!

ಈ ಮಹೋತ್ಸವದಲ್ಲಿ ಕೇವಲ ವೀರಶೈವರೊಬ್ಬರೇ ಭಾಗಿಗಳಾಗಿರದೆ, ಸೊಲ್ಲಾಪುರಪಟ್ಟಣದಲ್ಲಿರುವ ಮುಸಲ್ಮಾನರೇ ಮೊದಲಾದ ಸರ್ವಮತದವರೂ ಭಾಗಿಗಳಾಗಿ ಅಸಾಧಾರಣವಾದ ಭಕ್ತಿವಿಶೇಷದಿಂದ ಈ ಮಹೋತ್ಸವವನ್ನು 'ನ ಭೂತೋ ನ ಭವಿಷ್ಯತಿ' ಎಂಬಂತೆ ನಡೆಯಿಸಿದರೆಂಬ ವಿಷಯವನ್ನು ಕೇಳಿದರೆ ಯಾವ ಮಾನವನ ಹೃತ್ಕಮಲವು ವಿಕಸಿತವಾಗಲಿಕ್ಕಿಲ್ಲ?

ಈ ಮಹೋತ್ಸವವು ಮಾಣಿಕಚೌಕಿಗೆ ಬಂದಕೂಡಲೇ ಸೊಲ್ಲಾಪುರ ಮುನಸಿಪಾಲಟಿ ಕೌನ್ಸಿಲರಾದ ಮಿ|| ದಾವೂದ್‌ಸಾಹೇಬ ಮನ್ಯಾರ ಇವರು ತಮ್ಮ ಸಮಾಜದ ವತಿಯಿಂದ ಶ್ರೀಜಗದ್ಗುರುಗಳವರಿಗೆ ಹಾರವನ್ನು ಸಮರ್ಪಿಸಿ ತಮ್ಮ ವಂದನೆಗಳನ್ನು ಸಲ್ಲಿಸಿದರು.

ಪ್ರತಿಯೊಬ್ಬ ವ್ಯಾಪಾರಿಗಳು ತಮ್ಮ ತಮ್ಮ ಅಂಗಡಿಗಳಲ್ಲಿ ದೊರೆಯುವ ಸಾಮಾನುಗಳಿಂದ ಮಂಟಪಗಳನ್ನೂ ತೋರಣಗಳನ್ನೂ ರಚಿಸಿದ್ದರು. ಬಂಗಾರದ ವ್ಯಾಪಾರಿಗಳು ಬಂಗಾರದ ಸಾಮಾನ್ನು ಗಳಿಂದಲೂ, ಬೆಳ್ಳಿಯ ವ್ಯಾಪಾರಿಗಳು ಬೆಳ್ಳಿಯ ಸಾಮಾನುಗಳಿಂದಲೂ, ಹಿತ್ತಾಳಿ ವ್ಯಾಪಾರಿಗಳು ಹಿತ್ತಾಳಿಯ ಸಾಮಾನುಗಳಿಂದಲೂ, ಕೆಲವರು ರೇಶ್ಮೆ ಬಟ್ಟೆಗಳಿಂದಲೂ, ಜರತಾರಿ ವ್ಯಾಪಾರಿಗಳು ಜರತಾರಿ ವಸ್ತ್ರ ಗಳಿಂದಲೂ, ಕಾಜಿನ ವ್ಯಾಪಾರಿಗಳು ಕಾಜಿನ ಸಾಮಾನುಗಳಿಂದಲೂ, ಸ್ವದೇಶಿವಸ್ತ್ರವ್ಯಾಪಾರಿಗಳು ಸ್ವದೇಶೀ ವಸ್ತ್ರಗಳಿಂದಲೂ ಇದರಂತೆಯೇ ನಾನಾ ತರಹದ ವ್ಯಾಪಾರಿಗಳು ತಮ್ಮತಮ್ಮಲ್ಲಿ ದೊರೆಯುವ ನಾನಾ ತರಹದ ಸಾಮಾನುಗಳಿಂದಲೂ ತೋರಣಗಳನ್ನು ರಚಿಸಿ ನಗರವನ್ನು ಬಹು ಅಂದವಾಗಿ ಶೃಂಗರಿಸಿದ್ದರು. ಆ ದಿವಸ ಸೊಲ್ಲಾಪುರ ಪಟ್ಟಣದ ಶೋಭೆಯು ದೇವೇಂದ್ರನ ಪಟ್ಟಣವಾದ ಅಮರಾವತಿಯ ಶೋಭೆ ಯನ್ನು ತಿರಸ್ಕರಿಸುವಂತಿತ್ತು. ಎಲ್ಲ ಮತದವರೂ ಸೇರಿ ಅಸದೃಶವಾದ ಭಕ್ತಿಯಿಂದ ಈ ತರಹದ ವೈಭವವನ್ನು ಏರ್ಪಡಿಸಿದ್ದನ್ನು ನೋಡಿ ದರೆ, ಇದು ಜಗದಾಚಾರ್ಯರ ಮಹಿಮೆಯುದ್ಯೋತಕವಾಗಿತ್ತು. ಈ ರೀತಿಯಾಗಿದ್ದ ಮಹೋತ್ಸವವು ಸೊಲ್ಲಾಪುರಪಟ್ಟಣದಲ್ಲಿ ವಿರಾಜಿಸುವ ಶ್ರೀ ಸಿದ್ಧೇಶ್ವರ ದೇವಾಲಯದಿಂದ ಹೊರಟು ಪಂಚಕಟ್ಟಾ, ವಿಜಾಪುರ ವೇಶ, ಮಾಣಿಕಚೌಕ, ಭಾಂಡೆಗಲ್ಲಿ, ಲೋಖಂಡಗಲ್ಲಿ, ಕರಾಣಗಲ್ಲಿ, ವಾರದಗಲ್ಲಿ, ಕುಂಬಾರವೇಶ, ಜೋಡಭಾವಿಪೇಠ, ಭುಸಾರಗಲ್ಲಿ, ಮಿಠಗಲ್ಲಿ, ಚಾಟಿಗಲ್ಲಿ, ಬಾಳಿವೇಶ, ಶ್ರೀ ಮಲ್ಲಿಕಾರ್ಜುನದೇವಾಲಯ ಮೊದಲಾದ ಸ್ಥಾನಗಳಲ್ಲಿ ಅತ್ಯಂತ ವೈಭವದಿಂದ ನೆರವೇರಿ ಮಧ್ಯಾಹ್ನ ೩ ಘಂಟೆಗೆ ರಾವ್‌ಸಾಹೇಬ್ ಘೋಬಡೆ ಇವರ ದಿವ್ಯಭವನಕ್ಕೆ ಬಿಜಯಂಗೈಸಿತು. ಶ್ರೀಜಗದ್ಗುರುಗಳವರು ಪಲ್ಲಕ್ಕಿಯಿಂದಿಳಿದು ಸದರಿ ಭುವನದಲ್ಲಿ ಭವ್ಯವಾಗಿ ಅಲಂಕರಿಸಲ್ಪಟ್ಟದ್ದ ಸಿಂಹಾಸನವನ್ನಾರೋಹಣ

ಮಾಡಿದರು. ಕೂಡಲೇ ಜಗದಾಚಾರ್ಯರ ಜಯಜಯಕಾರವು ದಿಙ್ಮಂಡಲವನ್ನು ವ್ಯಾಪಿಸಿತು. ಆ ಮೇಲೆ ಡಾಕ್ಟರ್ ದೇಶಮುಖರು, ಮ|| ರಾ|| ಚಪ್ಪಳಿಗಿ ಸಿದ್ಧರಾಮಪ್ಪನವರು, ಮನೋಹರವಾದ ವ್ಯಾಖ್ಯಾನವನ್ನು ಮಾಡಿದರು. ಅನಂತರ ಶ್ರೀಜಗದ್ಗುರುಗಳವರು ಸರ್ವಭಕ್ತಾದಿಗಳೂ ಆನಂದಸಾಗರದಲ್ಲಿ ಲೋಲಾಡುವಂತೆ ತಮ್ಮ ಅಮೃತವಾಣಿಯಿಂದ ಬೋಧಾಮೃತವನ್ನು ಪಾನಮಾಡಿಸಿ ಉತ್ಸವ ದರ್ಶನಕ್ಕಾಗಮಿಸಿದ ಸಕಲ ಭಕ್ತರನ್ನೂ ಪುನೀತರನ್ನಾಗಿ ಮಾಡಿದರು. ಸೊಲ್ಲಾಪುರದಲ್ಲಿ ನೆರವೇರಿದಂಥ ಮಹೋತ್ಸವವು ಯಾವ ಪಟ್ಟಣದಲ್ಲಿಯೂ ಇಲ್ಲಿಯವರೆಗೆ ನೆರವೇರಲಿಲ್ಲವೆಂದು ಹೇಳಿದರೆ ಅತಿಶಯೋಕ್ತಿಯೆನಿಸಲಾರದು. ಶ್ರೀ ಜಗದ್ಗುರುಗಳವರನ್ನು ಕರೆಯಿಸಿಕೊಳ್ಳುವುದಕ್ಕಾಗಿ ಸೊಲ್ಲಾಪುರದ ಮಹಾಜನಗಳು ಸ್ವಾಗತಕಮಿಟಿಯನ್ನು ನೇಮಿಸಿದ್ದರು. ಈ ಸ್ವಾಗತಕಮೀಟಿಯ ಅಧ್ಯಕ್ಷಸ್ಥಾನವನ್ನು ಜಗದ್ವಿಖ್ಯಾತರೂ ಪರಮಗುರುಭಕ್ತರೂ, ವೀರಶೈವಧರ್ಮೋದ್ಧಾರ ಕಾರ್ಯತತ್ಪರರೂ ಆಗಿಹೋದ ಧರ್ಮಾವತಾರಿ ಕೈಲಾಸವಾಸಿ ರಾವ್‌ಬಹದ್ದೂರ್ ವಾರದಮಲ್ಲಪ್ಪನವರ ಸತ್ಪುತ್ರರಾದ ಮ|| ವಾರದಚನ್ನಬಸವಪ್ಪನವರು ವಹಿಸಿದ್ದರು. ಈ ಮಹೋತ್ಸವದಲ್ಲಿ ಸೊಲ್ಲಾಪುರದ ಸುಪ್ರಸಿದ್ಧ ಮುಂದಾಳುಗಳಾದ ಮ|| ರಾ|| ಶ್ರೀ ನಾಗಪ್ಪಣ್ಣ ಅಬ್ದುಲ್‌ಪೂರಕರ, ಮ|| ರಾ|| ಚನ್ನಬಸಪ್ಪಣ್ಣವಾರದ ಮ|| ರಾ|| ನಾಗಪ್ಪಣ್ಣ ಕಾಡಾದೆ, ಮ|| ರಾ|| ವಿಶ್ವನಾಥಪ್ಪಣ್ಣ ದರಗೋಪಾಟೀಲ, ಡಾ|| ದೇಶಮುಖ, ಮ|| ರಾ|| ಚಪ್ಪಳಿಗಿ, ಮ|| ರಾ|| ಡುಮಣೆ, ಮ|| ರಾ|| ಗಂಭೀರೆ, ಮ|| ರಾ|| ಕಾರಂಜೆ, ಮ|| ರಾ|| ಮಾಳಗೆ, ಮ|| ರಾ|| ರೇವಣಸಿದ್ದಪ್ಪ ಹಿರೇಹಬ್ಬು, ಇವರೇ ಮೊದಲಾದ ಗುರುಭಕ್ತಶಿಖಾಮಣಿಗಳು ಅಸಾಧಾರಣವಾದ ಭಕ್ತಿಭಾವವನ್ನು ವಹಿಸಿ ಈ ಮಹಾಕಾರ್ಯವನ್ನು ನೆರವೇರಿಸಿದರು. ಬಾರ್ಶಿ ಶಹರನಿವಾಸಿಗಳಾದ ಗುರುಭಕ್ತಶಿಖಾಮಣಿ

ಮ|| ರಾ|| ಅಣ್ಣಾಸಾಹೇಬ ಕಥಲೆ ಇವರು ಸೊಲ್ಲಾಪುರಕ್ಕಾಗಮಿಸಿ ಮಹೋತ್ಸವದ ಏರ್ಪಾಟಿನಲ್ಲಿ ಭಾಗಿಗಳಾಗಿದ್ದರು. ಶ್ರೀ|| ಷ|| ಬ್ರ|| ಹುಟಗಿ ಪಟ್ಟದಸ್ವಾಮಿಗಳವರು, ಶ್ರೀ ಬಾರ್ಶಿ ಪರಾಂಡಕರಮಠದ ಪಟ್ಟದಸ್ವಾಮಿಗಳವರು, ಶ್ರೀ ಜೈನಾಪುರ ಚರಮೂರ್ತಿಸ್ವಾಮಿಗಳ ವರು, ವಾಳವೇಕರ್, ವೇಳಾಪುರಕರ್ ಇವರೇ ಮೊದಲಾದ ಅನೇಕ ಜನ ಪಟ್ಟಚರಮೂರ್ತಿಸ್ವಾಮಿಗಳವರೂ ಅನೇಕ ಜನ ಪಂಡಿತರೂ ಆಗಮಿಸಿ ಈ ಮಹೋತ್ಸವಕ್ಕೆ ಅಸಾಧಾರಣವಾದ ಶೋಭೆಯನ್ನುಂಟು ಮಾಡಿದ್ದರು. ೨೦-೩೦ ಸಹಸ್ರಜನ ವೀರಶೈವಮಂಡಲಿಯಿಂದ ಯುಕ್ತ ವಾಗಿರುವ ಈ ಪಟ್ಟಣದಲ್ಲಿ ಸರ್ವರೂ ಅಸಾಧಾರಣವಾದ ಗುರುಭಕ್ತಿ ಯಿಂದ ಜಗದ್ಗುರುಮಹೋತ್ಸವದಲ್ಲಿ ಭಾಗಿಗಳಾಗಿರುವದನ್ನು ನೋಡಿ ದರೆ ಸೊಲ್ಲಾಪುರದ ವೀರಶೈವ ಮಂಡಲಿಯ ಪುಣ್ಯಕ್ಕೆ ಎಣೆಯೇ ಇಲ್ಲ. ಒಟ್ಟಿಗೆ ಈ ಮಹೋತ್ಸವವು ಜಗದಾಚಾರ್ಯರ ಆಶೀರ್ವಾದಬಲ ದಿಂದಲೂ, ಮ|| ರಾ|| ನಾಗಪ್ಪಣ್ಣ ಅಬ್ದುಲ್ ಪೂರಕರ್, ಮ|| ರಾ|| ವಾರದ, ಮ|| ರಾ|| ಕಾಡಾದೆ ಇವರೇ ಮೊದಲಾದ ಗುರುಭಕ್ತಶಿಖಾ ಮಣಿಗಳ ಭಕ್ತಿಪ್ರಭಾವದಿಂದಲೂ, ನಗರನಿವಾಸಿಗಳಾದ ಸಮಸ್ತ ವೀರಶೈವ ಜನಸ್ತೋಮದಿಂದಲೂ ಅನಿತರಸಾಧಾರಣ ವೈಭವದಿಂದ ನೆರವೇರಿತು.

## ಪಂಢರಪುರದಲ್ಲಿ ಅಡ್ಡಪಲ್ಲಕ್ಕಿಮಹೋತ್ಸವ

ಮೊದಲು ಪ್ರಸಿದ್ಧಿಸಲ್ಪಟ್ಟಂತೆ ತಾ|| ೨೩-೧೦-೩೩ ನೆಯ ಸೋಮವಾರ ದಿವಸ ಪಂಢರಪುರದಲ್ಲಿ ಶ್ರೀಜಗದ್ಗುರುಗಳವರ ಅಡ್ಡ ಪಲ್ಲಕ್ಕಿಮಹೋತ್ಸವವು ೭೨ ಬಿರುದಾವಳಿಗಳೊಡನೆ ವಿಶೇಷ ವೈಭವ ದಿಂದ ನೆರವೇರಿತು. ಉತ್ಸವಕ್ಕೆ ನಾನಾ ಪ್ರಾಂತಗಳಿಂದ ಬಹು ಜನರು ಆಗಮಿಸಿದ್ದರು. ಪಂಢರಪುರದ ಪ್ರತಿಯೊಂದು ಮತದವರೂ ಸೇರಿ

ಪಟ್ಟಣವನ್ನು ಬಹು ಮನೋಹರವಾಗಿ ಶೃಂಗರಿಸಿದ್ದರು. ಎಲ್ಲ ಮತದವರೂ ಶ್ರೀಗಳವರಲ್ಲಿ ಅಸಾಧಾರಣವಾದ ಭಕ್ತಿಯನ್ನು ತೋರ್ಪಡಿಸಿದುದು ಸ್ತುತ್ಯವಾಗಿತ್ತು. ಬಾರ್ಶಿ ಸೊಲ್ಲಾಪುರಗಳಲ್ಲಿ ನಡೆದ ಉತ್ಸವಕ್ಕಿಂತಲೂ ಇಲ್ಲಿಯ ಉತ್ಸವವು ಮಿಗಿಲಾಯಿತೆಂದು ಸೊಲ್ಲಾಪುರ ಬಾರ್ಶಿಯ ಪ್ರಮುಖರೇ ಭಾಷಣಮಾಡಿದರು. ಇದು ಪಂಢರಪುರದ ವೀರಶೈವರಿಗೆ ವಿಶೇಷವಾದ ಶೋಭೆಯನ್ನುಂಟುಮಾಡತಕ್ಕ ವಿಷಯವಾಗಿತ್ತು. ಇನ್ನೊಂದು ಮಹತ್ವದ ವಿಷಯವೇನೆಂದರೆ—ಇಲ್ಲಿ ವೀರಶೈವರು ವಿಶೇಷವಾಗಿರುವುದಿಲ್ಲ. ಅನ್ಯಮತೀಯರೇ ವಿಶೇಷವಾಗಿದ್ದಾರೆ. ಇಂಥ ಪಟ್ಟಣದಲ್ಲಿ ಎಲ್ಲಾ ಮತೀಯರ ಗೌರವದೊಡನೆ ಅಡ್ಡಪಲ್ಲಕ್ಕಿ ಮಹೋತ್ಸವವು ಅಭೂತಪೂರ್ವವಾಗಿ ನಡೆದುದಕ್ಕೆ ಶ್ರೀಜಗದ್ಗುರುಗಳವರ ತಪಃಪ್ರಭಾವವೇ ಮೂಲಕಾರಣವೆಂದು ಘಂಟಾಘೋಷವಾಗಿ ಹೇಳಬಹುದಾಗಿದೆ. ಅಸಾಧಾರಣವಾದ ಭಕ್ತಿವಿಶೇಷದಿಂದ ಅಭೂತಪೂರ್ವವಾದ ಮಹೋತ್ಸವವನ್ನು ನೆರವೇರಿಸಿದ ಪಂಢರಪುರದ ವೀರಶೈವರೇ ಧನ್ಯರು! ಇವರ ಜನ್ಮವೇ ಸಾರ್ಥಕವು!

## ಮಂಗಳವೇಡೆಯಲ್ಲಿ ಅಡ್ಡಪಲ್ಲಕ್ಕಿಮಹೋತ್ಸವ

ಶ್ರೀಮದುಜ್ಜಯಿನೀ ಜಗದ್ಗುರುಗಳವರು ಪಂಢರಪುರ ಮುಕ್ಕಾಮಿನಿಂದ ತಾ|| ೩೧-೧೨-೩೩ ನೇ ಭಾನುವಾರ ದಿವಸ ಸೋಲಾಪುರ ಡಿಸ್ಟ್ರಿಕ್ಟ ಮಂಗಳವೇಡೆಗೆ ದಯಮಾಡಿಸಿದರು. ಗ್ರಾಮದ ಪ್ರಮುಖರು ಶ್ರೀಜಗದ್ಗುರುಗಳವರನ್ನು ಎದುರುಗೊಂಡು ಗೌರವಿಸಿದರು. ಶ್ರೀಗಳವರ ಮಹೋತ್ಸವಕ್ಕಾಗಿ ಸದರಿ ಗ್ರಾಮವು ತಳಿರುತೋರಣಾದಿಗಳಿಂದ ವಿಶೇಷವಾಗಿ ಶೃಂಗರಿಸಲ್ಪಟ್ಟಿತ್ತು. ಅಡ್ಡಪಲ್ಲಕ್ಕಿ ಮಹೋತ್ಸವವು ಶ್ರೀ ದಾಮಾಜೀಪಂತದೇವಾಲಯದಿಂದ ಸಕಲ ಬಿರುದಾವಳಿಗಳೊಡನೆಯೂ ನಾನಾವಿಧವಾದ ವಾದ್ಯವೈಭವದೊಡನೆಯೂ ಪ್ರಾರಂಭವಾಯಿತು. ಈ

ಮಹೋತ್ಸವದಲ್ಲಿ ವೀರಶೈವ ಸಮಾಜದವರೂ ಇತರ ಸಮಾಜದವರೂ ಭಾಗಿಗಳಾಗಿ ಅಸಾಧಾರಣವಾದ ಆನಂದೋದ್ರೇಕದಿಂದ ಈ ಕಾರ್ಯ ವನ್ನು ನೆರವೇರಿಸಿದರು. ಈ ಮಹೋತ್ಸವಕ್ಕೆ ಬಾರ್ಶಿ ವೀರಶೈವ ಗರ್ಜನಾಪತ್ರಿಕೆಯ ಸಂಪಾದಕರಾದ ಶ್ರೀಗುರು ಪರಾಂಡಕರ ಮಠದ ಪಟ್ಟದಸ್ವಾಮಿಗಳವರೂ ಶ್ರೀ ಗುಡ್ಡಾಪುರದ ಪಟ್ಟದಸ್ವಾಮಿಗಳವರೂ ಆಗಮಿಸಿದ್ದರಲ್ಲದೆ ಬಾರ್ಶಿಯ ಸುಪ್ರಸಿದ್ಧ ಶ್ರೀಮಂತರಾದ ಮ|| ರಾ|| ಅಣ್ಣಾಸಾಹೇಬ ಕಥಲೆ ಮೊದಲಾದವರೂ, ಪಂಢರಪುರದ ಪ್ರಮುಖ ಜನರೂ ಸುತ್ತ ಮುತ್ತ ಗ್ರಾಮಗಳ ಜನರೂ ವಿಶೇಷವಾಗಿ ಸಮ್ಮಿಲಿತ ರಾಗಿದ್ದರು. ಸರಕಾರೀ ಅಧಿಕಾರಿಗಳು ಉತ್ಸವದಲ್ಲಿ ಸರಿಯಾದ ವ್ಯವಸ್ಥೆ ಯನ್ನಿಟ್ಟದ್ದರು. ಮುನಿಸಿಪಾಲಿಟಿಯ ಪ್ರೆಸಿಡೆಂಟರಾದ ಮ|| ರಾ|| ಕೃಷ್ಣ ರಾವ್ ಕಿಲ್ಲೇದಾರ್ ವಕೀಲ್, ತಾತ್ಯಾ ಕಾಶೀರಾಂ ತೇಲಿ, ಗಣಪತಿ ರಾವ್ ತೇಲಿ ಬಾಪೂರಾವ್ ಪಾಟೀಲ್, ಸಂಶುದ್ದೀನ್ ಖಾಜೀಸಾಹೇಬ ಶ್ರೀಮಂತ ಧೊಂಡೋಪಂತ ಕರಮರಕರ, ಸಿದ್ಧರಾಮಪ್ಪ ಬುರುಕೂಲ ಮೊದಲಾದ ಪ್ರಮುಖರು ತಮ್ಮ ತಮ್ಮ ಸಮಾಜದ ವತಿಯಿಂದ ಶ್ರೀಗ ಳವರನ್ನು ಸತ್ಕರಿಸಿದರು. ಮಹೋತ್ಸವವು ಮ|| ರಾ|| ಶಿವಲಿಂಗಪ್ಪಾ ಪಟ್ಟಣಶೆಟ್ಟಿ ಇವರ ಗೃಹಕ್ಕೆ ಬಂದು ತಲಪಿತು. ಅನಂತರ ಜಗದ್ಗುರ್ರು ಗಳವರು ಅಲ್ಲಿ ವಿರಚಿತವಾಗಿದ್ದ ಸಿಂಹಾಸನವನ್ನಾರೋಹಣಮಾಡಿ ಸರ್ವ ರಿಗೂ ಆಶೀರ್ವಾದವನ್ನನುಗ್ರಹಿಸಿದರು. ಆ ಸಮಯದಲ್ಲಿ ಪಂಢರ ಪುರದ ಮ|| ರಾ|| ಶಂಕರರಾವ್ ಕಟಾಪ ಇವರು ಶ್ರೀಜಗದ್ಗುರುಗಳವರು ಮಹಾರಾಷ್ಟ್ರದೇಶಕ್ಕೆ ಆಗಮಿಸಿ ಮಹಾರಾಷ್ಟ್ರದೇಶವನ್ನು ಪುನೀತವ ನ್ನಾಗಿ ಮಾಡಿದ ವಿಷಯವನ್ನು ವಿಶದವಾಗಿ ಸಂಭಾಷಿಸಿದರಲ್ಲದೆ, ಈ ಮಹಾಕಾರ್ಯದಲ್ಲಿ ಶ್ರೀ|| ದಾದಾಮಹಾರಾಜ ಮಂಗಳವೇಡೆಕರ ಶ್ರೀ|| ಬಸವಲಿಂಗಸ್ವಾಮಿ ಸಲಗರಕರ ಶ್ರೀ|| ಸಿದ್ಧರಾಮಸ್ವಾಮಿ ಮಂದರೂಪ ಕರ ಮ|| ರಾ|| ಶಿವಲಿಂಗಪ್ಪಾ ಪಟ್ಟಣಶೆಟ್ಟಿ ಇವರೇ ಮೊದಲಾದವರು

ವಿಶೇಷವಾದ ಭಾಗವನ್ನು ವಹಿಸಿ ಕಾರ್ಯವನ್ನು ಮಾಡಿದುದಕ್ಕಾಗಿ ಅತ್ಯಂತ ಸಂತೋಷಪಡಬೇಕಾಗಿದೆಯೆಂದು ಹೇಳಿದರು. ಆಮೇಲೆ ವೇ|| ಪಂಡಿತ ಶಂಕರಶಾಸ್ತ್ರಿಗಳವರು ಕನ್ನಡಭಾಷೆಯಲ್ಲಿ ಶ್ರೀಜಗದ್ಗುರು ಪಂಚಾಚಾರ್ಯರ ಲೀಲಾವಿಷಯವನ್ನು ಸಪ್ರಮಾಣವಾಗಿ ಪ್ರತಿಪಾದಿಸಿ ಸರ್ವರೂ ಪರಮತಪೋನಿಧಿಗಳಾಗಿರುವ ಶ್ರೀಮದುಜ್ಜಯಿನೀ ಜಗದ್ಗುರುಗಳವರ ಸೇವೆಯನ್ನು ತ್ರಿಕರಣಪೂರ್ವಕವಾಗಿ ಮಾಡಿ ಧನ್ಯರಾಗಬೇಕೆಂದು ಭಾಷಣಮಾಡಿದರು. ಅನಂತರ ಶ್ರೀಜಗದ್ಗುರುಗಳವರು ಶಕ್ತಿವಿಶಿಷ್ಟಾದ್ವೈತ ಸಿದ್ಧಾಂತ ಸ್ವರೂಪವನ್ನು ಸರ್ವರಿಗೂ ಅಪ್ಪಣೆಕೊಡಿಸಿದರು. ಅನಂತರ ಶ್ರೀಜಗದ್ಗುರು ಪಂಚಾಚಾರ್ಯರ ಜಯಘೋಷದೊಡನೆ ಸಭೆಯು ವಿಸರ್ಜಿಸಲ್ಪಟ್ಟಿತು.

## ಪಲ್ಲಾಗಟ್ಟೆಯಲ್ಲಿ ರಜತಾಂದೋಲಿಕಾಮಹೋತ್ಸವ

ಜಗಲೂರು ತಾಲೂಕು ಪಲ್ಲಾಗಟ್ಟೆ ಗ್ರಾಮದಲ್ಲಿ ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರ ರಜತಾಂದೋಲಿಕಾಮಹೋತ್ಸವವು ತಾರೀಕು ೧೮-೪-೩೫ ಗುರುವಾರ ಸಮಸ್ತ ಬಿರುದಾವಲಿಗಳೊಡನೆ ಅತ್ಯಂತ ವೈಭವದಿಂದ ನೆರವೇರಿತು. ಈ ಮಹೋತ್ಸವಕ್ಕೆ ಆಜುಬಾಜು ಗ್ರಾಮಗಳ ಅನೇಕ ಜನಸಮೂಹವು ನೆರೆದಿದ್ದಿತು. ಈ ರೀತಿಯಾಗಿ ನೆರೆದಿದ್ದ ಜನಸ್ತೋಮಮಧ್ಯದಲ್ಲಿ ಜಗದ್ಗುರುಗಳವರ ಸವಾರಿಯು ದಯಮಾಡಿಸಿದ ಕೂಡಲೆ ಮಠಸ್ಥರು, ಗೌಡರು, ಶಾನುಭೋಗರು, ಬಣಕಾರರು ಮುಂತಾದ ದೈವದವರು ಇಷ್ಟಕಪಾಲದೊಡನೆ ಶ್ರೀಜಗದ್ಗುರುಗಳವರಿಗೆ ನಜರ ಕಾಣಿಕೆಯನ್ನೊಪ್ಪಿಸಿದ ತರುವಾಯ ವೇ|| ಬಿಳಿಚೋಡು ಕುಂದೂರು ಮಠದ ಕರಿಬಸಪ್ಪಯ್ಯನವರೂ ಮತ್ತು ವೇ|| ಬಿಳಚೋಡು

ಮಠದ ಮಹಾದೇವಪ್ಪಯ್ಯನವರೂ ಗ್ರಾಮಪ್ರಮುಖರನ್ನು ಮಹಾಸ್ವಾಮಿಗಳವರಿಗೆ ಪರಿಚಯಮಾಡಿಸಿದರು. ಶ್ರೀಜಗದ್ಗುರುಗಳವರು ಪಲ್ಲಕ್ಕಿಯಲ್ಲಿ ಮೂರ್ತಮಾಡಿದೊಡನೆ ಮಂಗಳವಾದ್ಯಗಳು ಭೋರ್ಗರೆದವು. ಚಿಕ್ಕಮಕ್ಕಳಾದಿಯಾಗಿ ಸರ್ವರೂ ಜಗದಾಚಾರ್ಯರ ಜಯಜಯಕಾರವನ್ನು ಮಾಡುತ್ತಿರಲು ರಾಜಬೀದಿಯಲ್ಲಿ ಉತ್ಸವವು ಮುಂದಕ್ಕೆ ಸಾಗಿತು. ಈ ರೀತಿಯಾಗಿ ಈ ಮಹೋತ್ಸವವು ವೈಭವದಿಂದ ನೆರವೇರಿ ಗುರುಭಕ್ತಾಗ್ರೇಸರ ಬಣಕಾರ ಬಸಪ್ಪನವರ ಗೃಹದ ಮುಂಭಾಗದಲ್ಲಿ ರಚಿಸಲ್ಪಟ್ಟಿದ್ದ ಸಭಾಮಂಟಪಕ್ಕೆ ಬಂದು ತಲಪಿತು. ಶ್ರೀಜಗದ್ಗುರುಗಳವರು ಪಲ್ಲಕ್ಕಿಯಿಂದಿಳಿದು ಸಭಾಮಂಟಪದಲ್ಲಿ ಸುಂದರವಾಗಿ ಅಲಂಕರಿಸಲ್ಪಟ್ಟಿದ್ದ ಸಿಂಹಾಸನವನ್ನಾರೋಹಣಮಾಡಲು ಕೂಡಲೆ ಜಗದಾಚಾರ್ಯರ ಜಯಜಯಕಾರವು ದಿಙ್ಮಂಡಲವನ್ನು ವ್ಯಾಪಿಸಿತು. ಅನಂತರ ಸ್ವಾಗತಪತ್ರ ಸಮರ್ಪಣವಾದಮೇಲೆ ಮಹಾಶ್ರೀಗಳವರು ಗುರೂತ್ಕರ್ಷ ವಿಷಯವಾಗಿ ಲೌಕಿಕ, ಧಾರ್ಮಿಕ ಮತ್ತು ಪಾರಮಾರ್ಥಿಕ ಉದಾಹರಣಸಹಿತ ಅಪ್ಪಣೆಕೊಡಿಸಿದರು. ಅಷ್ಟಕ್ಕೆ ಸಭೆಯು ಸಮಾಪ್ತಿಗೊಂಡಿತು. ಅಲ್ಲಿಂದ ಶ್ರೀಗಳವರು ಪ್ರತಿನಿತ್ಯವೂ ಸಾಯಂಕಾಲದಲ್ಲಿ ಅಷ್ಟಾವರಣ, ಪಂಚಾಚಾರ, ಷಟ್‌ಸ್ಥಲ ಮೊದಲಾದ ವೀರಶೈವ ಸಿದ್ಧಾಂತವನ್ನು ಸುಲಭಶೈಲಿಯಲ್ಲಿ ಸುಶ್ರಾವ್ಯವಾಗಿ ಬೋಧಿಸುತ್ತಿದ್ದರು. ತಾ॥ ೨೪-೪-೩೫ ಬುಧವಾರ ಶ್ರೀಹಿಮವತ್ಕೇದಾರ ಚರಪಟ್ಟಾಧ್ಯಕ್ಷ ಶ್ರೀ ೧೦೮ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರ ಸವಾರಿಯು ಶ್ರೀ॥ ಮಹಾಸನ್ನಿಧಿಯ ದರ್ಶನಕ್ಕೋಸ್ಕರ ದಯಮಾಡಿಸಿ ಪುರದ ಹೊರಗಡೆ ಇರುವ ಬಿಲ್ವವೃಕ್ಷದ ಬಳಿ ಮಂಡಿಸಿರಲು ಶ್ರೀಜಗದ್ಗುರುಗಳವರು ಗ್ರಾಮದವರೊಂದಿಗೆ ಎದುರ್ಗೊಂಡು ಕುಶಲಪ್ರಶ್ನೆಗಳಾದ ತರುವಾಯ ಉಭಯ ಜಗದ್ಗುರುಗಳನ್ನು ಎರಡು ಪಲ್ಲಕ್ಕಿಗಳಲ್ಲಿ ಮೂರ್ತಮಾಡಿಸಿಕೊಂಡು ಅಲಂಕೃತ

ವಾದ ಪುರವೀಥಿಯಲ್ಲಿ ಮೆರವಣಿಗೆ ಸಹಿತ ಅತಿ ವಿಜೃಂಭಣೆಯಿಂದ ವೇ|| ಬಿ. ಎಂ. ಮಹಾದೇವಪ್ಪಯ್ಯನವರ ಪ್ರಾರ್ಥನೆಯಂತೆ ಪೂಜಾನುಷ್ಠಾನಕ್ಕೆ ಸದರಿಯವರ ಮನೆಗೆ ದಯಮಾಡಿಸಿ ಮಹಾರುದ್ರಾಭಿಷೇಕ, ಸಹಸ್ರ ಬಿಲ್ವಾರ್ಚನೆ, ಪಾದಪೂಜಾ ವಗೈರೆ ಆದ ತರುವಾಯ ನೆರೆದಿದ್ದ ಭಕ್ತಮಾಹೇಶ್ವರರಿಗೆ ಅನ್ನಸಂತರ್ಪಣೆ ನಡೆಸಲ್ಪಟ್ಟಿತು. ಆ ದಿವಸ ಸಾಯಂಕಾಲದ ಸಭೆಯಲ್ಲಿ ಉಭಯ ಜಗದ್ಗುರುಗಳವರು ಗುರುಭಕ್ತಿ ವಿಚಾರವಾಗಿಸದ್ಬೋಧಾಮೃತವನ್ನಿತ್ತು ಸರ್ವರನ್ನೂ ಆನಂದಸಾಗರದಲ್ಲಿ ಲೋಲಾಡುವಂತೆ ಮಾಡಿದರು. ಮಾರನೆದಿವಸ ಪೂಜಾನುಷ್ಠಾನಗಳನ್ನು ತೀರಿಸಿಕೊಂಡು ಕೇದಾರ ಜಗದ್ಗುರುಗಳವರು ಕುಡತಿನಿಗೆ ದಯಮಾಡಿಸಿದರು. ಮುಂದೆ ಮಹಾಸವಾರಿಯು ವೈಶಾಖ ಶು|| ೫ ಯಲ್ಲಿ ಜರಗುವ (ಶ್ರೀ ದಾರುಕಜಯಂತಿ) ಶ್ರೀ ಮರುಲಸಿದ್ಧೇಶ್ವರ ರಥೋತ್ಸವವನ್ನು ನೆರವೇರಿಸುವುದಕ್ಕಾಗಿ ಉಜ್ಜಯಿನಿಗೆ ದಯಮಾಡಿಸಿದರು.

## ಜಗಲೂರಿನಲ್ಲಿ ಮಹಾಪಾದಪೂಜೋತ್ಸವ

ಇಲ್ಲಿಯ ಸುಪ್ರಸಿದ್ಧ ಶ್ರೀಮಂತರೂ ಮಾಹೇಶ್ವರಭಕ್ತಿಧುರೀಣರೂ ಅನ್ನದಾನಶೂರರೂ ಎಂದು ಪ್ರಸಿದ್ಧರಾದ ಕೈ|| ತಿಪ್ಪಣ್ಣನವರ ಮಂದಿರಕ್ಕೆ ಶ್ರೀಮಾನ್ ಸಾಹುಕಾರ ಸಣ್ಣತಮ್ಮಣ್ಣನವರ ಪುತ್ರರಾದ ಮ|| ರಾ|| ಮಹಾಲಿಂಗಪ್ಪನವರೆಂಬ ಭಕ್ತಮಹೋದಯರು " ಸ್ವರ್ಣಾಂದೋಲಿಕಾ ಮಹೋತ್ಸವ " ಪೂರ್ವಕವಾಗಿ ಜಗದ್ಗುರು ಭಗವತ್ಪಾದರನ್ನು ಬಿಜಯಂಗೈಸಿಕೊಳ್ಳಬೇಕೆಂದು ಸಂಕಲ್ಪಿಸಿ, ಮಹಾಸನ್ನಿಧಿಯಲ್ಲಿ ಪ್ರಾರ್ಥಿಸಿಕೊಂಡಪ್ರಕಾರ ತಾ|| ೯-೧೨-೨೮ ರ ಪ್ರಾತಃಕಾಲ ೯ ಗಂಟೆಗೆ ಸರಿಯಾಗಿ ಮಹಾಸವಾರಿಯು ಭಂಗಾರದ ಪಲ್ಲಕ್ಕಿಯಲ್ಲಿ ಮೂರ್ತಮಾಡಿಸಿದ ಕೂಡಲೇ ಶ್ವೇತಚ್ಛತ್ರಾದಿ ಸಕಲ ರಾಜಬಿರುದಾವಲಿ

ಗಳೊಡನೆ ಜಗಲೂರು ಟೌನಿನಲ್ಲಿ ಮಹೋತ್ಸವವು ವೈಭವಪೂರ್ವಕವಾಗಿ ನಡೆಯಿತು. ಮಹಾಜನಗಳೆಲ್ಲರೂ ಮಹೋತ್ಸವದಲ್ಲಿ ಭಾಗಿಗಳಾಗಿ ಅತ್ಯಂತ ಭಕ್ತಿಯಿಂದ ಶ್ರೀ ಜಗದ್ಗುರುಗಳವರ ಉತ್ಸವವನ್ನು ನೆರವೇರಿಸಿದರು. ಮಹಾಸಂಸ್ಥಾನದ ವಿದ್ವಾನ್ ಪಂಡಿತ ಕೊಂಗವಾಡ ವೀರಭದ್ರ ಶಾಸ್ತ್ರಿಗಳು ವೈದಿಕವಿದ್ವನ್ಮಂಡಲಿಯೊಡನೆ ವೇದಘೋಷವನ್ನು ಮಾಡಿದರು. ಈ ರೀತಿಯಾದ ಮಹೋತ್ಸವವು ಸಾಹುಕಾರರ ಮಂದಿರಕ್ಕೆ ಬಂದು ತಲ್ಪಿತು. ಪಂ॥ ವೀರಭದ್ರಶಾಸ್ತ್ರಿಗಳು ಪ್ರಾಸ್ತಾವಿಕ ಭಾಷಣ ದ್ವಾರಾ ಜಗದ್ಗುರು ಭಗವತ್ಪಾದರ ದರ್ಶನದಿಂದ ಆಗುವ ಫಲವನ್ನು ಬೋಧಿಸಿ ಭಗವತ್ಪಾದರ ಮಹಿಮೆಗಳನ್ನು ವರ್ಣಿಸಿದರು. ಬಳಿಕ ಜಗದ್ಗುರುಗಳು ಶಿವಭಕ್ತ್ಯಾಧಿಕ್ಯದ ವಿಷಯವನ್ನು ಮನೋರಂಜಕವಾಗಿ ಸರ್ವರಿಗೂ ಬೋಧಿಸಿ ಆಶೀರ್ವದಿಸಿದರು. ಬಳಿಕ ಸಭಾವಿಸರ್ಜನೆಯಾಗಿ ಮಹಾಸನ್ನಿಧಿಯು ಸ್ನಾನಮಂದಿರಕ್ಕೆ ತೆರಳಿ ಸ್ನಾನ ತೀರಿಸಿಕೊಂಡು ಪೂಜಾಮಂದಿರದಲ್ಲಿ ಶಿವಪೂಜಾದಿ ನಿತ್ಯಕರ್ಮಗಳನ್ನು ಪೂರೈಸಿದಕೂಡಲೆ ಸಾಹುಕಾರ ಮಹಾಲಿಂಗಪ್ಪನವರು ತಮ್ಮ ಪಿತೃ ಭ್ರಾತೃಗಳು ಸಹಿತವಾಗಿ ಮಹಾಪಾದಾರ್ಚನೆಯನ್ನು ವಿಧ್ಯುಕ್ತವಾಗಿ ನಡೆಯಿಸಿದರು. ಆಗ್ಗೆ ಶ್ರೀ ವ್ಯಾಕರಣರತ್ನ ಚಿದ್ಘನಶಿವಾಚಾರ್ಯರು ವೈದಿಕಮಂತ್ರಗಳನ್ನು ಪಠಿಸಿದರು. ಬಳಿಕ ೧೦೮ ದಾರುಕಾಚಾರ್ಯರ ನಾಮಸಂಕೀರ್ತನವನ್ನು ಮಾಡಿಸಿ ೧೦೮ ರೂಪಾಯಿಗಳನ್ನು ೧೦೮ ಬಿಲ್ವಗಳನ್ನು ಪುರೋಹಿತರಾದ ಪುರಗಿರಿ ಶಿವಾಚಾರ್ಯರು ಸಾಹುಕಾರರಿಂದ ಸಮರ್ಪಣೆಮಾಡಿಸಿದರು. ಬಳಿಕ ಮಾಹೇಶ್ವರ ಗಣಸಂತರ್ಪಣವು ಮಹಾವೈಭವದಿಂದ ನಡೆಯಿತು. ಮಹಾಸಂಸ್ಥಾನದಲ್ಲಿ ಶ್ರೀಪುರಗಿರಿ ಚಿದ್ಘನಶಿವಾಚಾರ್ಯರು "ಸಂಸ್ಕೃತವಿದ್ಯಾಮಹತ್ವ ತನ್ಮೂಲಕ ವೈದಿಕವಿದ್ಯೆಯ ಆವಶ್ಯಕತೆ" ಈ ವಿಷಯದ ಮೇಲೆ ಬಹು ಗಂಭೀರವಾದ ಉಪನ್ಯಾಸವನ್ನು ಮಾಡಿದರು. ಮಹಾಸನ್ನಿಧಿಯಲ್ಲಿ ಪ್ರಸಿದ್ಧ

ಪಂಡಿತರೂ ಶಿವಕಥಾಶಾಸ್ತ್ರಿಗಳೂ ಪ್ರಸಿದ್ಧ ಗಾಯಕರೂ ಬಂದು ತಮ್ಮ ತಮ್ಮ ಪಾಂಡಿತ್ಯವನ್ನು ತೋರಿಸಿ ಬಹುಮಾನವನ್ನು ಪಡೆದರು.

ಇದೇ ಟೌನಿನ ಶ್ರೀಮಂತ ಜವಳಿ ಅಂಗಡಿ ಚಾಪರಿ ತಿಪ್ಪಣ್ಣನವರು ತಾ|| ೧೨-೧೨-೨೮ ರಲ್ಲಿ ಜಗದ್ಗುರು ಭಗವತ್ಪಾದರನ್ನು ಸ್ವಗೃಹಕ್ಕೆ ಮಹೋತ್ಸವಪೂರ್ವಕ ವಿಜಯಂಗೈಸಿಕೊಂಡು ಸತಿಸುತ ಬಂಧುಬಾಂಧವಾದಿ ಪುರಜನ ಪರಿವಾರದೊಡನೆ ಸೇರಿ ಮಹಾಸನ್ನಿಧಿಯ ಶಿವರುದ್ರಾಭಿಷೇಕ ಶಿವಪೂಜಾದಿ ಸಮರ್ಚನವಂ ಸಾಂಗವಾಗಿ ನೆರವೇರಿಸಿ ಮಹಾಪಾದಾರ್ಚನವಂ ಯಥಾವಿಧಿಯಾಗಿ ನಡೆಯಿಸಿ ಶ್ರೀ ಚರಣತೀರ್ಥಪ್ರಸಾದವಂ ಸ್ವೀಕರಿಸಿ ಮಹಾಶೀರ್ವಾದಕ್ಕೆ ಪಾತ್ರರಾದರು, ಮಹಾಸಂಸ್ಥಾನ ಪದ್ಧತಿಪ್ರಕಾರ ಕಾಣಿಕಾಸಮರ್ಪಣವನ್ನು ಮಾಡಿದರು.

## ಶಿಖಾಧಾರಣದ ವಿಷಯದಲ್ಲಿ ಶ್ರೀಜಗದ್ಗುರು ಉಜ್ಜಯಿನೀ ಪೀಠಾಧೀಶ್ವರರು ಕೊಟ್ಟ ಹುಕುಂ

|| ಶ್ರೀಜಗದ್ಗುರು ಪಂಚಾಚಾರ್ಯಾಃ ಪ್ರಸೀದಂತು ||

ಶ್ರೀಮದ್ವೇದವೇದಾಂತ ಸಿದ್ಧಾಂತ ಪ್ರತಿಪಾದಿತ ವೀರಶೈವ ಮಹಾಮತಸ್ಥಾಪನಾಚಾರ್ಯ ಶ್ರೀಮತ್ಪರಶಿವದಕ್ಷಿಣಲಪನೋದ್ಭವ ಜಗದ್ಗುರು ದಾರುಕಶಿವಾಚಾರ್ಯಪರಂಪರಾಗತ ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ ಚರಪಟ್ಟಾಧ್ಯಕ್ಷ ಶ್ರೀಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿನಾಂ.

## ದೀಕ್ಷಾಗುರುಸ್ಥಾನದಿಂದ

ಶ್ರೀಮದ್ಧರಗುರುಚರಚರಣಾರವಿಂದ ಮಧುಕರಾಯಮಾನರಾದ ನೈಜಾಮ ಇಲಾಖಾ ಕಲ್ಯಾಣ ಪ್ರಾಂತಕ್ಕೆ ಸೇರಿದ ಬಿದರಕೋಟೆ, ಮುಧೋಳ, ಹಾಲಹಳ್ಳಿ, ಬ್ಯಾಲಹಳ್ಳಿ, ಡೋಣವಾಂವ ಈ ಯಾವತ್ತೂ

ಗ್ರಾಮವಾಸಿಗಳಾದ ಶ್ರೀಮತ್ಪಟ್ಟಚರಾಧಿಕಾರಿಗಳು ಮಠ, ಮಠಪತ್ತಿ, ಡೇಸಾಯಿ, ಪಾಟೀಲ, ಶ್ಯಾನಭೋಗ ಈ ಯಾವತ್ತೂ ಸದ್ಭಕ್ತರು ಇವರಿಗೆ ಸಕಲ ಶಿವಸಾಮ್ರಾಜ್ಯ ಸಮೃದ್ಧಿರಸ್ತು ಇತ್ಯಾಶೀರ್ವಾದ ನಿರೂಪಮದಾಗಿ.

ಮಹಾಗುರುಪೀಠಕ್ಕೆ ತಾವುಗಳು ಶಿಖಾಧಾರಣವನ್ನು ಮಾಡಿಕೊಳ್ಳುವವಕ್ಕೆ ತಮ್ಮ ಅಪ್ಪಣೆಯನ್ನು ಕೋರುತ್ತೇವೆಂದು ಬಿನ್ನೈಸಿಕೊಂಡ ಪತ್ರಿಕೆಯು ಶ್ರೀಮತ್ ಯಡಕೇರಿ ಕಟ್ಟಿಮನೆ ಸಾವಿರದೇವರು ಚರಮೂರ್ತಿಗಳಾದ ಶಿವಶಂಕರದೇವರ ಮರಿದೇವರಾದ ಸಿದ್ಧರಾಮಪ್ಪನವರಿಂದ ತಲ್ಪಿತು. ನೋಡುವಲ್ಲಿ ಸರ್ವವಿಷಯಗಳು ಅವಗಾಹಿಸಲ್ಪಟ್ಟವು. ಆದರೆ

ಶ್ರೀ ವೇದಾಗಮವೀರಶೈವಸರಣಿಂ ಶ್ರೀಷಟ್‌ಸ್ಥಲೋದ್ಯನ್ಮಣಿಂ।
ಶ್ರೀಜೀವೇಶ್ವರಯೋಗಪದ್ಮತರಣಿಂ ಶ್ರೀಗೋಪ್ಯಚಿಂತಾಮಣಿಂ।
ಶ್ರೀಸಿದ್ಧಾಂತಶಿಖಾಮಣಿಂಲಿಖಯಿತಾ ಯಸ್ತಂ ಲಿಖಿತ್ವಾ ಪರಾನ್ ।
ಶೃತ್ವಾಶ್ರಾವಯಿತಾಽಸಯಾತಿ ವಿಮಲಾಂ ಭಕ್ತಿಂಚ ಮುಕ್ತಿಂ ಪರಾಂ ॥

ಶ್ರೀಮಹಾಗುರು ಗುರುಸಾರ್ವಭೌಮನಾದ ಜಗದ್ಗುರು ಶ್ರೀರೇವಣಸಿದ್ಧೇಶ್ವರ ಮಹಾಸ್ವಾಮಿಯ ಉಪದೇಶಸ್ವರೂಪವಾದ ಈ ಸಿದ್ಧಾಂತಶಿಖಾಮಣಿನಾಮಕ ಗ್ರಂಥವನ್ನು ಯಾವನು ಬರೆಯಿಸುತ್ತಾನೋ, ಯಾವನು ಶ್ರವಣಮಾಡಿಸುತ್ತಾನೋ, ಯಾವನು ಬರೆದು ಬರೆಯಿಸಿ ಕೇಳಿ ಕೇಳಿಸುತ್ತಾನೋ ಅವನು ನಿರ್ಮಲವಾದ ಭಕ್ತಿಯನ್ನೂ, ಶ್ರೇಷ್ಠವಾದ ಮುಕ್ತಿಯನ್ನೂ ಪಡೆಯುತ್ತಾನೆಂದು ಆರ್ಯೋಕ್ತಿಯಿರುವದರಿಂದ ಸಾಕ್ಷಾತ್ ಈ ಗ್ರಂಥದಲ್ಲಿ ಉಕ್ತವಾದ ಧರ್ಮಾಚರಣೆಯಲ್ಲಿ ತತ್ಪರರಾದ ಶಿವಭಕ್ತರಿಗೆ ಶ್ರೇಷ್ಠವಾದ ಭಕ್ತಿ, ನಿರ್ಮಲ

ವಾದ ಮುಕ್ತಿ ಶೀಘ್ರದಲ್ಲಿ ದೊರೆಯದಿರಲಾರದೆಂದು ಬೇರೆ ಹೇಳ ಬೇಕಾಗಿಲ್ಲ.

ಆದಕಾರಣ ತಾವು ಕೇಳಿಕೊಳ್ಳುವ ಅಪ್ಪಣೆಯನ್ನೇ ಶ್ರೀಮದ್ಭಗವತ್ಪಾದ ರೇವಣಸಿದ್ಧೇಶ್ವರ ಮಹಾಸ್ವಾಮಿಯು ಅಪ್ಪಣೆ ಕೊಟ್ಟಿರುವದೇನಂದರೆ-- "ಶಿಖಾಯಾಮೇಕಮೇಕಾಸ್ಯಂ ರುದ್ರಾಕ್ಷಂ ಧಾರಯೇದ್ಬುಧಃ" ಇತಿ. ವೀರಶೈವನಾದವನು ಶಿಖಾಧಾರಣವನ್ನು ಮಾಡಿಕೊಂಡು ಆ ಶಿಖೆಗೆ ಒಂದು ಅಥವಾ ಐದು ಮುಖಗಳುಳ್ಳ ರುದ್ರಾಕ್ಷಿಯೊಂದನ್ನು ಧರಿಸಬೇಕೆಂತಲೂ, ಈ ರೀತಿ ಧರಿಸಿದ ಶಿವಭಕ್ತನಿಗೆ "ತಸ್ಯ ಪಾಪಕಥಾ ನಾಸ್ತಿ ಮೂಢಸ್ಯಾಪಿನ ಸಂಶಯಃ" ಪಾಪದ ಸುದ್ದಿಯೇ ಇಲ್ಲವೆಂದು ಮಹಾಗುರುವಿನ ಅಪ್ಪಣೆಯಿರುವದರಿಂದ ವೀರಶೈವರಾದವರು ಶಿಖೆಯನ್ನು ವಿಧಿವತ್ತಾಗಿ ಬಿಟ್ಟು ಶಿಖೆಯಲ್ಲೊಂದು ರುದ್ರಾಕ್ಷಿಯನ್ನು ಧರಿಸುವದಕ್ಕೆ ಶ್ರುತಿಗುರುಗಳ ಅಪ್ಪಣೆ ಇರುವದಾಗಿ ಈ ಪತ್ರಮೂಲಕ ತಮ್ಮಗಳಿಗೆ ನಿರೂಪಿಸಿದೆ, ತಾ॥ ೧೨-೭-೧೯೩೦

ಮುಕ್ಕಾಂ—ಅಮಲಾಪೂರ ತಾಲೂಕ ಕೂಡ್ಲಗಿ.

## ಬೀರೂರು ವೀರಶೈವ ಮಹಾಸಭೆ

೨೭-೧೨-೧೯೧೯ ನೆಯ ಇಸವಿಯಲ್ಲಿ ಮೈಸೂರು ರಾಜ್ಯದ ಬೀರೂರು ನಗರದಲ್ಲಿ ನಡೆಯಲಿದ್ದ ೯ ನೆಯ ವೀರಶೈವ ಮಹಾಸಭೆಗೆ ಆಗಮಿಸಲು ಶ್ರೀಜಗದ್ಗುರು ಪಂಚಾಚಾರ್ಯ ಭಗವತ್ಪಾದರಲ್ಲಿ ಬಿನ್ನೈಸಿಕೊಂಡಮೇರೆಗೆ ಶ್ರೀರಂಭಾಪುರೀ ಜಗದ್ಗುರು ಪಂಚಾಕ್ಷರಶಿವಾಚಾರ್ಯ ಭಗವತ್ಪಾದರು, ಶ್ರೀ ಹಿಮವತ್ಕೇದಾರ ಜಗದ್ಗುರು ವಿಶ್ವಲಿಂಗಶಿವಾಚಾರ್ಯ ಭಗವತ್ಪಾದರು, ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರು ಆಗಮನಮಾಡಿದ್ದರಿಂದ ಈ ತ್ರಿಮೂರ್ತಿಗಳ ಅಧ್ಯಕ್ಷತೆಯಲ್ಲಿ ನಡೆದ ವೀರಶೈವ ಮಹಾಸಭೆಯು

ವೀರಶೈವರ ಭಾಗ್ಯೋದಯವನ್ನು ಸೂಚಿಸುವಂತಿತ್ತು. ಅಪಾರ ಜನಸಂದಣಿಯಿಂದೊಡಗೂಡಿದ ಭವ್ಯಮಂಟಪಗಳಲ್ಲಿ ಅಧಿಷ್ಠಿತರಾಗಿದ್ದ ಶ್ರೀಭಗವತ್ಪಾದಂಗಳವರು ವೀರಶೈವ ಧರ್ಮೋನ್ನತಿಯ ಬಗ್ಗೆ ಅಮೋಘವಾದ ವಿಷಯಗಳನ್ನು ಅಪ್ಪಣೆಕೊಡಿಸಿದನಂತರ ಪಂಚಾಚಾರ್ಯರ ಜಯಘೋಷದೊಡನೆ ಮಹಾಸಭೆಯು ಮುಕ್ತಾಯಗೊಂಡಿತು.

## ಹಿಮವತ್ಕೇದಾರ ಪೀಠೋದ್ಧಾರ

ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಶ್ರೀ ಹಿಮವತ್ಕೇದಾರ ಕ್ಷೇತ್ರದಿಂದ ದಯಮಾಡಿಸಿದ ಶ್ರೀಜಗದ್ಗುರು ವಿಶ್ವಲಿಂಗಶಿವಾಚಾರ್ಯ ಮಹಾಸ್ವಾಮಿಗಳನ್ನು ಆತ್ಯಾದರದಿಂದ ಸತ್ಕರಿಸಿ ಮಹಾಸಂಸ್ಥಾನದ ರಾಜಬಿರುದಾವಳಿಯೊಡನೆ ವಿಜೃಂಭಣೆಯಿಂದ ಉಜ್ಜಯಿನೀ ಪೀಠಕ್ಕೆ ಕರೆದುಕೊಂಡು ಬಂದದ್ದರಿಂದ ಶ್ರೀ ವಿಶ್ವಲಿಂಗಭಗವತ್ಪಾದರು ಶಿವಪೂಜಾನುಷ್ಠಾನಗಳ ಮೂಲಕ ಉಜ್ಜಯಿನಿ ಪೀಠದಲ್ಲಿಯೇ ವಿಶ್ರಾಂತಿಗಾಗಿ ನಿವಾಸ ಮಾಡಿದರು. ಇಷ್ಟರಲ್ಲಿಯೇ ಶ್ರೀ ಕೇದಾರಮಠದ ೧೯೧೧ ನೆಯ ಇಸವಿಯ ಸ್ಕೀಮಿನ ಮೇರೆಗೆ ದಕ್ಷಿಣದೇಶದ ಜಂಗಮ ಗೋಸಾಯಿ ಶ್ರೀ ನೀಲಕಂಠಲಿಂಗ ಬ್ರಹ್ಮಚಾರಿಗಳ ಹೆಸರಿಗೆ ವಿಲ್ ಬರೆದು ರಜಿಸ್ಟರ ಮಾಡಿಸಿ ಗಢವಾಲ ಡಿಸ್ಟ್ರಿಕ್ಟ್ ಮೆಜಿಸ್ಟ್ರೇಟರ ಆಫೀಸಿನಲ್ಲಿ ಇಟ್ಟು ಬಂದಿದ್ದರೂ ತಮ್ಮ ದೇಹದ ಸ್ಥಿತಿಯು ವಿಶೇಷ ಅನಾರೋಗ್ಯವಾದ ಮೂಲಕ ಈ ಭಾಗದ ವೀರಶೈವ ಮಹಾಜನಗಳ ಅಭಿಪ್ರಾಯದ ಮೇರೆಗೆ ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳ ಸಾಕ್ಷಿತ್ವದಲ್ಲಿ ಬಳ್ಳಾರಿ ಜಿಲ್ಲಾ ಕೂಡ್ಲಿಗಿ ತಾಲೂಕಿನ ರಜಿಸ್ಟರರನ್ನು ಕರಿಸಿ ಕನ್ನಡವಲ್ಲಿ ಮತ್ತೊಂದು ಮೃತ್ಯುಪತ್ರವನ್ನು

ಶ್ರೀ ನೀಲಕಂಠಲಿಂಗ ಜಂಗಮಗೋಸಾಯಿಗಳ ಹೆಸರಿಗೆ ಬರೆಯಿಸಿ ರಜಿಸ್ಟರ ಮಾಡಿಸಿದರು. ಈ ಮೃತ್ಯುಪತ್ರದಲ್ಲಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳ ಹಸ್ತಾಕ್ಷರ (ಸಹಿ) ಇರುತ್ತದೆ. ಈ ಮೇಲ್ಕಂಡ ವಿಲ್ಲುಗಳು ನೈನೀತಾಲ ಕಮಿಶನರರ ಆಫೀಸಿನಲ್ಲಿ ವಿರಾಜಿಸುತ್ತಲಿವೆ. ಬಳಿಕ ೧೫-೭-೧೯೨೦ ನೆ ಇಸವಿಯಲ್ಲಿ ಶ್ರೀಜಗದ್ಗುರು ವಿಶ್ವಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಉಜ್ಜಯಿನೀ ಮಹಾಪೀಠದಲ್ಲಿಯೇ ಸಮಾಧಿಸ್ಥರಾದರು. ನಂತರ ಲಿಂಗೈಕ್ಯ ಶ್ರೀ ಭಗವತ್ಪಾದರ ವಿಲ್ ಪ್ರಕಾರ ಶ್ರೀ ನೀಲಕಂಠಲಿಂಗ ಬ್ರಹ್ಮಚಾರಿಗಳು ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಶಿವಾಶೀರ್ವಾದ ಬಲದಿಂದ ಶ್ರೀ ಕೇದಾರಪೀಠದ ೧೯೧೧ ನೆ ಇಸವಿಯ ಸ್ಕೀಮಿನ ಮೇರೆಗೆ ಉಷಾಮಠದಲ್ಲಿ ನಡೆದ ಎಲೆಕ್ಸನದಲ್ಲಿಯೂ ಕುಮಾಂವು ಡಿವಿಜನ ನೈನೀತಾಲ ಹೈಕೋರ್ಟಿನಲ್ಲಿಯೂ ವಿಜಯವನ್ನು ಸಂಪಾದಿಸಿ ತಾ|| ೧-೧೦-೧೯೨೧ ನೇ ಇಸವಿಯಲ್ಲಿ ಶ್ರೀಕಾಶೀ ಜಗದ್ಗುರು ಶಿವಲಿಂಗಶಿವಾಚಾರ್ಯ ಮಹಾಸ್ವಾಮಿಗಳಿಂದ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳ ಅಪ್ಪಣೆಯ ಮೇರೆಗೆ ಸ್ಥಿರಪಟ್ಟಾಧಿಕಾರವನ್ನು ಪಡೆದರು. ಬಳಿಕ ಗುಂತಕಲ್ಲ ಮುಕ್ಕಾಮಿನಲ್ಲಿ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಶ್ರೀಶೈಲ ಜಗದ್ಗುರು ನಾಗಲೂಟಿ ಭಿಕ್ಷಾವೃತ್ತಿ ಶಿವಾಚಾರ್ಯ ಮಹಾಸ್ವಾಮಿಗಳು ನೂತನ ಶ್ರೀಜಗದ್ಗುರು ನೀಲಕಂಠಲಿಂಗಶಿವಾಚಾರ್ಯ ಮಹಾಸ್ವಾಮಿಗಳನ್ನು ವಿಜಯಂಗೈಸಿಕೊಂಡು ಪೀಠದ ಗೌರವವನ್ನು ಸಲ್ಲಿಸಿದರು.

ತಾ|| ೧೫-೧-೧೯೨೨ ನೇ ಇಸವಿಯಲ್ಲಿ ಬಳ್ಳಾರಿ ಡಿಸ್ಟ್ರಿಕ್ಟ ರಾಯದುರ್ಗ ಪುರದಲ್ಲಿ ಪೌಡಿಗಢವಾಲ ಟೆಹರಿಗಢವಾಲ-ಮಹಾರಾಜ ಪ್ರದತ್ತ ರಾಜಗೌರವದ ಮೇರೆಗೆ ಬಳ್ಳಾರಿ ಜಿಲ್ಲಾ ಕಲೇಕ್ಟರರು

ಕೊಟ್ಟ ರಹದಾರಿಯ ಪ್ರಕಾರ ನೂತನ ಶ್ರೀಜಗದ್ಗುರು ನೀಲಕಂಠ ಲಿಂಗಶಿವಾಚಾರ್ಯ ಮಹಾಸ್ವಾಮಿಗಳ ನೂತನ ಅಡ್ಡಪಲ್ಲಕ್ಕಿಮಹೋತ್ಸವ ಸಂದರ್ಭದಲ್ಲಿ ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಬನಾರಸದಿಂದ ನೂತನವಾಗಿ ತಮಗಾಗಿ ತಯಾರಮಾಡಿಸಿ ತರಿಸಿದ ಸುವರ್ಣರಜತ ಪಲ್ಲಕ್ಕಿಯನ್ನು ಸಮರ್ಪಿಸಿ ಶ್ರೀ ಹಿಮವತ್ಕೇದಾರದ ಅಭಿನವ ಜಗದ್ಗುರುಗಳ ಘನತೆ ಗೌರವಗಳನ್ನು ಹೆಚ್ಚಿಸಿದರು.

ತಾ॥ ೨೪-೧೨-೧೯೨೬ ನೆಯ ಇಸವಿಯಲ್ಲಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಶ್ರೀ ಹಿಮವತ್ಕೇದಾರ ಜಗದ್ಗುರು ನೀಲಕಂಠಲಿಂಗಶಿವಾಚಾರ್ಯ ಮಹಾಸ್ವಾಮಿಗಳನ್ನು ಕರಿಸಿಕೊಂಡು ಉಜ್ಜಯಿನೀ ಕ್ಷೇತ್ರದಲ್ಲಿ ಲಿಂಗೈಕ್ಯರಾದ ಶ್ರೀಜಗದ್ಗುರು ವಿಶ್ವಲಿಂಗಶಿವಾಚಾರ್ಯಮಹಾಸ್ವಾಮಿಗಳ ಕೈಲಾಸಗಣಾರಾಧನೆಯನ್ನು ನಡೆಯಿಸಿ ಶ್ರೀಜಗದ್ಗುರು ನೀಲಕಂಠಲಿಂಗಶಿವಾಚಾರ್ಯಮಹಾಸ್ವಾಮಿಗಳಿಗೆ ಬಂಗಾರದ ಶಿವಲಿಂಗಪೀಟಿಕೆ (ಕರಡಿಗೆ) ಮುಂತಾದ ಸುವರ್ಣ ರಜತಜರತಾರಿಯ ಖಿಲ್ಲತ್ತುಗಳನ್ನು ಸಮರ್ಪಿಸಿ ಸಂತುಷ್ಟರಾದರು.

ತಾ॥ ೨೫-೧೨-೧೯೨೬ ನೆ ಇಸವಿಯಲ್ಲಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಶ್ರೀಜಗದ್ಗುರು ನೀಲಕಂಠ ಶಿವಾಚಾರ್ಯ ಮಹಾಸ್ವಾಮಿಗಳೊಡನೆ ಸಮಾಲೋಚನೆಮಾಡಿ ವೀರಶೈವ ಧರ್ಮಸ್ಥಾಪಕ ಪಂಚಾಚಾರ್ಯ ಪೀಠಗಳ ಮತ್ತು ವೀರಶೈವ ಧರ್ಮದ ಮತ್ತು ವೀರಶೈವ ಗುರುವರ್ಗದ ಉನ್ನತಿಗೋಸ್ಕರ ಅಹೋರಾತ್ರಿ ಪ್ರಯತ್ನಿಸುತ್ತಲಿದ್ದ ಪಂಡಿತರಾಜ ಶ್ರೀಕಾಶೀನಾಥಶಾಸ್ತ್ರಿಗಳನ್ನು ಕರೆಯಿಸಿಕೊಂಡು ಅವರ ಕಾರ್ಯದರ್ಶಿತ್ವದಲ್ಲಿ ೫ ನೆಯ ಪಟ್ಟಚರಾಧಿಕಾರಿಗಳ ಸಮ್ಮೇಲನವನ್ನೂ ಸಹ ಉಜ್ಜಯಿನಿಯಲ್ಲಿ ನಡಿಸಿ ಪಟ್ಟಚರಾಧಿಕಾರಿವರ್ಗಕ್ಕೆ ಸದ್ಬೋಧದಾನಮಾಡಿದರು.

## ಪಂಚಾಚಾರ್ಯಪ್ರಭಾ ಪ್ರಾದುರ್ಭಾವ

ಶ್ರೀಜಗದ್ಗುರು ಪಂಚಾಚಾರ್ಯ ಸೇವಾನಿರತರಾಗಿ ನೈಷ್ಠಿಕ ಬ್ರಹ್ಮಚಾರಿಗಳಾಗಿದ್ದ ಪಂ|| ಶ್ರೀಕಾಶೀನಾಥಶಾಸ್ತ್ರಿಗಳ ಅಧ್ಯಕ್ಷತೆಯಲ್ಲಿ ಮೈಸೂರ ರಾಜಧಾನಿಯಲ್ಲಿ ಪಂಚಾಚಾರ್ಯ ವಿದ್ಯುನ್ಮುದ್ರಣಾಲಯವನ್ನು ಸ್ಥಾಪಿಸಿ ಅದರ ಮೂಲಕ ವೀರಶೈವಧರ್ಮಗ್ರಂಥಮುದ್ರಣ ಮತ್ತು ಪಂಚಾಚಾರ್ಯಪ್ರಭೆ ಇವುಗಳು ನಡೆಯುವ ಸಲುವಾಗಿ ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರು ಐದುಸಾವಿರ, ಶ್ರೀ ಹಿಮವತ್ಕೇದಾರ ಜಗದ್ಗುರು ನೀಲಕಂಠಲಿಂಗ ಶಿವಾಚಾರ್ಯಭಗವತ್ಪಾದರು ಆರುಸಾವಿರ, ಶ್ರೀರಂಭಾಪುರೀಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯ ಭಗವತ್ಪಾದರು ಐದುಸಾವಿರ ರೂಪಾಯಿ ಮೂಲನಿಧಿಯನ್ನು ಅರ್ಪಿಸಿದರು. ಮತ್ತು ಶ್ರೀಜಗದ್ಗುರು ಭಗವತ್ಪಾದರ ಅಪ್ಪಣೆಯಮೇರೆಗೆ ಸಮಸ್ತ ವೀರಶೈವಮಹಾಜನರೂ ಪಟ್ಟಚರಾಧಿಕಾರಿಗಳೂ ಯಥಾಶಕ್ತಿ ನಿಧಿಯನ್ನು ಸಮರ್ಪಿಸಿದರು. ಆ ಪ್ರಕಾರ ತಾ|| ೧೬-೫-೧೯೨೭ ನೆಯ ಇಸವಿಯಲ್ಲಿ ಶಾಲಿವಾಹನಶಕ ೧೮೪೯ ಪ್ರಭವನಾಮಸಂವತ್ಸರದ ವೈಶಾಖ ಶುಕ್ಲ ಪಂಚಮಿಯ ದಿವಸ ಶ್ರೀಜಗದ್ಗುರು ದಾರುಕಾಚಾರ್ಯ ಜಯಂತಿ ಮಹೋತ್ಸವದ ಮಂಗಲಸಂದರ್ಭದಲ್ಲಿ ಶ್ರೀಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿ ಭಗವತ್ಪಾದರ ಮಂಗಲಾನುಗ್ರಹದಿಂದ ಮೈಸೂರಿನಲ್ಲಿ ನೂತನವಾಗಿ ಸಂಸ್ಥಾಪಿತವಾದ ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಪಂಚಾಚಾರ್ಯಪ್ರಭೆಯು ಪ್ರಾದುರ್ಭವಿಸಿ ಮುಂಬೈ, ಮೈಸೂರ, ಮದ್ರಾಸ, ನೈಜಾಮ ಪ್ರಾಂತಗಳಲ್ಲಿರುವ ವೀರಶೈವ ಮಹಾಮತೀಯ ಮಹೋದಯರ ಕರಕಮಲಗಳಲ್ಲಿ ವಿರಾಜಿಸಿತು. ಈ ಪಂಚಾಚಾರ್ಯ ಪ್ರಭೆಯು ಆಸ್ತಿಕರಿಗೆ ಶಾಸ್ತ್ರಪ್ರಮಾಣದಿಂದಲೂ ಸುಧಾರಕರಿಗೆ ಶಿಲಾಲೇಖಗಳಿಂದಲೂ ನ್ಯಾಯವಾದಿಗಳಿಗೆ

ಹೈಕೋರ್ಟ್ ಜಡ್ಜಮೆಂಟುಗಳಿಂದಲೂ ಈಶ್ವರ ಮತ್ತು ಧರ್ಮ ಮತ್ತು ಧರ್ಮಾಚಾರ್ಯರ ಕೀರ್ತಿಯನ್ನು ದಿಗಂತವಿಶ್ರಾಂತಗೊಳಿಸಿತು. ಶ್ರೀ ನಿಜಗುಣಾರಾಧ್ಯ ಮಹಾಶಿವಯೋಗೀಶ್ವರರ ತರುವಾಯ ಪಂಚಾಚಾರ್ಯ ಪ್ರಭೆಗೆ ಸಲ್ಲುವ ಕೀರ್ತಿಯು ಕ್ರಮಪ್ರಾಪ್ತವಾಗಿರುವುದೆನ್ನುವದರಲ್ಲಿ ಸಂದೇಹವಿಲ್ಲ.

ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಶಿವಯೋಗಿ ಸಾರ್ವಭೌಮರ ಮಹಾನುಗ್ರಹಬಲಾತ್ ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್ಸಿನಲ್ಲಿ ಕ್ರಮೇಣ ಶಿವಸಿದ್ಧಾಂತಮತಗ್ರಂಥಗಳೂ ಚಿತ್ರಗಳೂ ಮುದ್ರಿತವಾದವು. ಇದರಿಂದ ವೀರಶೈವಧರ್ಮವು ವಿಶ್ವತೋವಿಖ್ಯಾತವಾಯಿತು.

## ಧೋತ್ರೀಗ್ರಾಮದಲ್ಲಿ ನೆರವೇರಿದ ಧರ್ಮಪರಿಷತ್ತಿಗೆ ದಯಪಾಲಿಸಿದ ಶುಭಾಶೀರ್ವಾದಪತ್ರ

ಶ್ರೀಮದ್ವೇದವೇದಾಂತ ಸಿದ್ಧಾಂತ ಪ್ರತಿಪಾದಿತ ಶ್ರೀಮದ್ವೀರ ಶೈವ ಮಹಾಮತಸ್ಥಾಪನಾಚಾರ್ಯವರ್ಯ ಶ್ರೀಮತ್ತ್ರಿಭುವನಗುರು ಶ್ರೀ ೧೦೦೮ ಜಗದ್ಗುರು ದಾರುಕಾಚಾರ್ಯ ಪರಂಪರಾಗತೋಜ್ಜಯಿನೀ ಸದ್ಧರ್ಮಸಿಂಹಾಸನಾಧಿರೂಢ ಶ್ರೀಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀ ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿನಾಂ ಜ್ಞಾನಗುರು ಸ್ಥಲದಿಂದಾ—

ಶ್ರೀಮದ್ಗುರು ಪದನಖಚಂದ್ರಸಾಂದ್ರ ರುಚಿರುಂದ್ರ ಚಂದ್ರಿಕಾ ಚಂಚಚ್ಚಕೋರಾಯಮಾನರಾದ ಧೋತ್ರೀಗ್ರಾಮದಲ್ಲಿ ನೆರೆದ ಗುರುವರ್ಯಾಧಿವೇಶನದ ಶ್ರೀ ಪಟ್ಟಚರಾಧಿಕಾರಿಗಳಿಗೂ ವೀರಮಾಹೇಶ್ವರರಿಗೂ ವೀರಶೈವರಿಗೂ ವೀರಶೈವ ಮತಾನುಯಾಯಿಗಳಿಗೂ ಸಕಲ ಸೌಭಾಗ್ಯಸಿದ್ಧಿರಸ್ತು ಶ್ರೀಶಿವಭಕ್ತಿರಸ್ತು ನಿರ್ವಿಘ್ನಮಸ್ತು ಇತ್ಯಾಶೀರ್ವಾದ ನಿರೂಪಮುದಾಗಿ

(೧) ನಮ್ಮೀವೀರಶೈವ ಮತದಲ್ಲಿ ಅಷ್ಟಾವರಣಗಳೆನಿಸುವ ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷ, ಮಂತ್ರಗಳಲ್ಲಿ ಪರಶಿವನು ಎಡೆಬಿಡದೆ ವಾಸವಾಗಿರುವ ನೆಂಬುದು ಲೋಕಪ್ರಸಿದ್ಧವೂ ಶಾಸ್ತ್ರಪ್ರಸಿದ್ಧವೂ ಆಗಿರುವದು. ಆದ ಕಾರಣವೇ ಇಂಥ ಅಷ್ಟಾವರಣಗಳ ಸಂಬಂಧದಿಂದಲೇ ನಮ್ಮಾ ವೀರಶೈವ ಪುರಾತನ ಭಕ್ತಗಣವು ಜೀವಭಾವವನ್ನು ನೀಗಿ ಶಿವಭಾವ ವನ್ನು ಹೊಂದಿ ಅನೇಕಾಗಾಧಮಹತ್ವಶಾಲಿಯಾಯಿತೆಂಬ ಕಥೆಗಳು ಪುರಾಣಪ್ರಸಿದ್ಧಗಳಾಗಿರುವವು.

(೨) ಇಂಥ ಅಷ್ಟಾವರಣಗಳನ್ನು ವೀರಶೈವರು ಪ್ರತಿಗ್ರಾಮ ಗಳಲ್ಲಿಯೂ ಅನಾದಿಕಾಲದಿಂದಲೂ ಇದುವರೆಗೂ ಚ್ಯುತಿಬಾರದಂತೆ ಸಂರಕ್ಷಿಸಿಕೊಳ್ಳುತ್ತ ಬಂದಿರುವರು. ಆದಾಗ್ಯೂ ಈ ಕಲಿಕಾಲ ಮಹತ್ವದಿಂದ ಅಂಥ ಶಿವಸ್ವರೂಪಗಳಾದ ಅಷ್ಟಾವರಣಗಳು ಉತ್ತಮ ವಾದ ಸಂಸ್ಕಾರಗಳಿಲ್ಲದೆ ಕ್ಷೀಣದೆಶೆಯನ್ನು ಹೊಂದಲಿಕ್ಕೆ ಪ್ರಾರಂಭಿ ಸಿರುತ್ತವೆ.

(೩) ಅದು ಹೇಗೆಂದರೆ—ಗುರುಗಳು ವಿದ್ಯಾವಿಹೀನರಾಗಿರು ವರು. ಲಿಂಗಗಳು ಬಾಳಪ್ಪನ (ಹಿಟ್ಟಿನ) ಕಲ್ಲಿನಿಂದ ಕೂಡಿದ್ದು ಜಲಾಭಿಷೇಕ ಮಾತ್ರದಿಂದ ಕರಗುತ್ತವೆ. ಇಲ್ಲವೇ ಅವಯವಗಳು ಮುರಿದಿರುವವು. ಜಂಗಮರು ಶಾಸ್ತ್ರಜ್ಞಾನವಿಲ್ಲದೆ ಶಿವತ್ವಾಭಿವ್ಯಕ್ತಿ ವಿಹೀನರಾಗಿರುವರು. ಪಾದೋದಕ, ಪ್ರಸಾದಗಳಲ್ಲಿ ಸದಾಚಾರವಿಲ್ಲದೆ ಇಷ್ಟಾರ್ಥಸಿದ್ಧಿಗಳು ತೋರಲೊಲ್ಲವು. ವಿಭೂತಿಯು ಬಿಳಿಯಮಣ್ಣಿ ನಲ್ಲಿ ಕೆಲವು ಅಜ್ಞ ವೀರಶೈವರು ಆರೋಪಿಸಿರುವದರಿಂದ ಆ ವಿಭೂತಿ ಯಲ್ಲಿ ಮಂಗಲತ್ವವೇ ಸಿಕ್ಕುವಹಾಗಿಲ್ಲ. ಮಂತ್ರವಂತೂ ಅದರರ್ಥ ಜ್ಞಾನವಿಲ್ಲದೆ ನಿರರ್ಥಕವಾಗಿ ಪರಿಣಮಿಸಿರುತ್ತದೆ. ಈ ಪ್ರಕಾರವಾಗಿರು ವವೆಂಬುದು ವೀರಶೈವ ವಿಚಕ್ಷಣರಾದ ತಮ್ಮಗಳಿಗೆ ಗೋಚರವಿಲ್ಲೆಂ ಬುವಹಾಗಿಲ್ಲ.

(೪) ತಾವು ಇಂಥ ಅಷ್ಟಾವರಣಗಳನ್ನು ಸಂರಕ್ಷಿಸುವುದಕ್ಕಾಗಿಯೇ, ಇಂಥ ಸಭೆಗಳನ್ನು ಪ್ರತಿವರ್ಷ ನೆರವೇರಿಸಲು ಪ್ರಯತ್ನಪಡುವಿರೆಂಬುವುದನ್ನು ತಿಳಿದು ಚಿತ್ತಕ್ಕೆ ಆತ್ಯಾನಂದವೆನಿಸಿದೆ.

(೫) ತಮ್ಮಗಳಿಗೆ ಸೂಚಿಸುವದೇನೆಂದರೆ--ಅಷ್ಟಾವರಣಗಳಲ್ಲಿ ಮೂಲಭೂತಗಳಾದ ಪ್ರತಿ ಗ್ರಾಮಗಳಲ್ಲಿರುವ ಗುರುಜಂಗಮರನ್ನು ಪ್ರಥಮತಃ ವಿದ್ವಾಂಸರನ್ನಾಗಿ ಮಾಡಿದರೆ ಉಳಿದಾವರಣಗಳೆಲ್ಲವೂ ತಾವೇ ಸುಧಾರಿಸುವವು. ಆದಕಾರಣ ಪ್ರಥಮದಲ್ಲಿ ಈ ಗುರುಜಂಗಮರನ್ನು ಶಿವಶಾಸ್ತ್ರಜ್ಞರನ್ನಾಗಿ ಮಾಡಲು ಯತ್ನಿಸಬೇಕೆಂದು ಈ ನಿಮ್ಮ ಸಭೆಗೆ ಸೂಚನೆಯು.

(೬) ಪ್ರತಿಗ್ರಾಮದಲ್ಲಿರುವ ಮಠಾಧಿಕಾರಿಗಳು ಪ್ರಥಮತಃ ವೀರಶೈವಶಾಸ್ತ್ರದಲ್ಲಿರುವ ಗರ್ಭಾಧಾನಾದಿ ಷೋಡಶ ಕ್ರಿಯಾನಿಪುಣರಾಗಿ ಸ್ವತಃ ಶಿವಶಾಸ್ತ್ರಜ್ಞತ್ವದಿಂದ ಲಿಂಗಾರ್ಚನಾತತ್ಪರರಾಗಿ ಸರ್ವಭಕ್ತರಿಗೂ ಶಿವಭಕ್ತಿಯನ್ನೂ, ಶಿವಪೂಜೆಯನ್ನೂ ಶಿವಾಚಾರಗಳನ್ನೂ ಬೋಧಿಸಲು ಸಿದ್ಧರಾಗುವಂತೆ ಈ ಸಭೆಯವರು ಏರ್ಪಡಿಸಿ ಆ ಪ್ರಕಾರ ಜಾರಿಯಲ್ಲಿ ತರಬೇಕು.

(೭) ಶ್ರೀ ಪಟ್ಟಚರಾಧಿಕಾರಿಗಳು ಪ್ರಥಮತಃ ಶಿವಶಾಸ್ತ್ರಜ್ಞರಾಗಿ, ಪರಮತಶಾಸ್ತ್ರಗಳನ್ನೂ ಕಲಿತು ಪೂರ್ವಪಕ್ಷೋದ್ಘಾಟನದಿಂದ ಶಿವಶಾಸ್ತ್ರವನ್ನು ಸ್ಥಾಪಿಸಲು ಕುಶಲರಾಗುವಂತೆ ಈ ಸಭೆಯವರು ಏರ್ಪಡಿಸಬೇಕು.

(೮) ಕೆಲವು ಅಲ್ಪಜ್ಞರಾದವರು ಈ ಜಂಗಮರಿಗೆ ವಿದ್ಯಾಭ್ಯಾಸ ಮಾಡಿಸಿದರೆ ನಮಗೆ ಬಂದ ಫಲವೇನೆಂದು ಶಂಕಿಸುವರು. ತಮ್ಮ ಹೊಲದ ಮಾವಿನಮರಗಳನ್ನು ಚನ್ನಾಗಿ ಸಂರಕ್ಷಿಸಿ ಬೆಳೆಯಿಸಿದರೆ ಮಾಲಿಕನಿಗೆ ಉತ್ತಮ ಫಲಗಳು ಶಿಕ್ಕುವಂತೆ, ವೀರಶೈವರಾದ ನೀವು ನಿಮ್ಮ ಗುರುಜಂಗಮರನ್ನು ವಿದ್ಯಾಭ್ಯಾಸದಿಂದ ಸಂರಕ್ಷಿಸಿ ವೃದ್ಧಿಪಡಿಸಿ

ದರೆ ನಿಮಗೆ ನಿರಾಯಾಸವಾಗಿ ಮುಕ್ತಿಯೆಂಬ ಉತ್ತಮೋತ್ತಮಾಮೃತ ಸಮಾನ ಫಲಗಳು ಶಿಕ್ಕಲಾರವೇನು? ಮತ್ತು ಉತ್ತಮವಾದ ಶುದ್ಧವಾದ ಆಹಾರಗಳನ್ನು ತಯಾರುಮಾಡಿಕೊಳ್ಳುವ ಶಕ್ತಿಯಿದ್ದು ಉದಾಸೀನದಿಂದಲೂ ಆಲಸ್ಯದಿಂದಲೂ ಕದನ್ನವನ್ನು ಸೇವಿಸಿ ವ್ಯಥೆಪಡುವವನ ಸ್ಥಿತಿಯಂತೆ ನಮ್ಮ ಮತದ ಗುರುಜಂಗಮರನ್ನು ವಿದ್ವಾಂಸರನ್ನಾಗಿ ಮಾಡಿಕೊಳ್ಳದೆ ನಮ್ಮ ಕುಲಪದ್ಧತಿಪ್ರಕಾರ ಅವಿದ್ವಾಂಸರಾಗಿರುವ ಗುರು ಜಂಗಮರನ್ನು ಪೂಜಿಸಿ ತೀರ್ಥಪ್ರಸಾದಗಳನ್ನು ಸೇವಿಸಲು—

ಜ್ಞಾನಹೀನಂ ಗುರುಂ ಪ್ರಾಪ್ಯ ಕಥಂ ಮುಕ್ತಿಮವಾಪ್ನುಯಾತ್।
ಭಿನ್ನನೌಕಾಗತಃ ಸಿಂಧೋರ್ಯಥಾಪಾರಂ ನ ಗಚ್ಛತಿ ॥ ೬ ॥

'ಕಿಂ ಶಿಲಾಂ ತಾರಯೇಚ್ಛಿಲಾ?' ಎಂಬಂತೆ ಮುಕ್ತಿಯು ದೊರೆಯದೆ ಮಾಡಿದ ಪೂಜೆಯು ವ್ಯರ್ಥವಾಗಿ ವೃಥಾಯಾಸಕ್ಕೆ ಕಾರಣವಾಗುವುದು.

ಕೆಲವರು ಗೃಹಸ್ಥರಾದ ಮಠಸ್ಥರು ತೀರ್ಥಪ್ರಸಾದಗಳ ಪೂಜೆಗೆ ಅರ್ಹರಲ್ಲವೆಂದು ತಿಳಿದಿರುವರು. ಲಗ್ನವಿಲ್ಲದೆ ಇರುವ ಪಟ್ಟಚರಾಧಿಕಾರಿಗಳೇ ಅರ್ಹರೆಂದು ಭಾವಿಸಿರುವರು. ಈ ವಿಷಯದಲ್ಲಿ ವೀರಶೈವಾಚಾರ ಪ್ರದೀಪಿಕೆಯಲ್ಲಿ (ಪಾನು ೨೨)

ಗುರುರ್ಗೃಹಸ್ಥ ಏವಸ್ಯಾತ್ ನಕದಾಚಿದ್ಯತಿರ್ಗುರುಃ ।
ಯಥಾಹಂ ಸರ್ವಲೋಕಾನಾಂ ಗುರುರಂಬಿಕಯಾ ಸಹ॥

ಕ್ರಿಯಾಸಾರೆ —

ಗೃಹಸ್ಥಸ್ಸರ್ವವರ್ಣೇಷು ಶ್ರೇಷ್ಠೋ ಗುರುರುದಾಹೃತಃ ।
ನೈಷ್ಠಿಕಸ್ತ್ವಧಮೋ ಜ್ಞೇಯೋ ಭೌತಿಕಸ್ತು ತತೋಽಧಮಃ॥೨॥
ವಾನಪ್ರಸ್ಥಯತೀನಾಂ ತು ಗುರುತ್ವಂ ನಿಷ್ಫಲಂ ಭವೇತ್ ।
ಶಿಷ್ಯಸ್ಯ ಶಿಕ್ಷಣೀಯತ್ವಾತ್ ಗುರುಗೌರವಭಾವತಃ ॥೩॥

ತಸ್ಮಾತ್ಸರ್ವಪ್ರಯತ್ನೇನ ಗುರೋರ್ಗೌರವಮಾಚರೇತ್ ।
ವಯಃಷೋಡಶಕಾದೂರ್ಧ್ವಂ ಇಷ್ಯತೆ ಸಪ್ತತೇರಧಃ ॥೪॥
ಶಿವಜ್ಞಾನಾಮೃತಾಸ್ವಾದಪರಿಸಂತುಷ್ಟಮಾನಸಃ ।
ತತ್ವವಿಚ್ಛಿವಸಂಯುಕ್ತೋ ಮುಕ್ತಿದೋ ನತು ಚಾಪರಃ ॥೫॥
ಗುರುವೋ ಬಹವಃ ಸಂತಿ ಶಿಷವಿತ್ತಾಪಹಾರಕಾಃ ।
ದುರ್ಲಭೋಽಯಂ ಗುರುರ್ದೇವಿ ಶಿಷ್ಯಹೃತ್ತಾಪಹಾರಕಃ ॥೬॥

ಹೀಗೆ ಶಿವಶಾಸ್ತ್ರವಿರುವುದರಿಂದ ಗೃಹಸ್ಥರು ಪರಮಪೂಜ್ಯರೆಂದೂ, ಅವರು ಶಿಷ್ಯರಿಗೆ ತೀರ್ಥಪ್ರಸಾದಗಳನ್ನು ಕೊಟ್ಟು ಸರ್ವ ಪಾಪಪರಿಹಾರ ಮಾಡತಕ್ಕವರೆಂದೂ ಮನದಲ್ಲಿ ಮರೆಯದೆ ಜ್ಞಾಪಕದಲ್ಲಿಡತಕ್ಕದ್ದು.

ಇಂಥ ವೀರಶೈವಮತದ ಕುಂದುಕಗಳನ್ನು ಪರಿಹರಿಸುವದಕ್ಕಾಗಿ ರಾವಬಹದ್ದೂರ್ ಅಪ್ಪಾಸಾಹೇಬ ವಾರದ ಮಲ್ಲಪ್ಪ ಬಸಪ್ಪ ಸೊಲ್ಲಾಪುರ ಇವರು ತಮ್ಮ ಸ್ವತಃ ಖರ್ಚಿನಿಂದ ವೀರಶೈವ ಮತಧರ್ಮಗ್ರಂಥಗಳನ್ನು ಛಾಪಿಸಿ ಪ್ರಸಿದ್ಧಪಡಿಸಿದ್ದಲ್ಲದೆ, ಆ ಧರ್ಮಗ್ರಂಥಗಳಲ್ಲಿ ಪ್ರತಿ ಗ್ರಾಮಗಳಲ್ಲಿರುವ ಮಠಸ್ಥರು ಕುಶಲರಾಗಿ ವೀರಶೈವಧರ್ಮಪರಿಪಾಲಕರಾಗಲೆಂದು ಒಂದು ವೀರಶೈವ ವಾರದಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸಿ ಸ್ವತಃ ಖರ್ಚಿನಿಂದ ತಾವಿರುವವರೆಗೂ ಸಾಗಿಸಿದ್ದುದು ಈ ಸಭೆಯವರಿಗೆ ಗೋಚರಿಸಿದೆ.

ಇಂಥ ಪಾಠಶಾಲೆಗೆ ಪ್ರತಿಗ್ರಾಮಗಳಲ್ಲಿರುವ ಮಠಾಧಿಕಾರಿಗಳ ವಟುಗಳು ಅವಶ್ಯವಾಗಿ ಹೋಗಿ ಸಂಸ್ಕೃತ ವಿದ್ಯಾಭ್ಯಾಸದಿಂದ ವೀರಶೈವಶಾಸ್ತ್ರಕುಶಲರಾಗುವಂತೆ ನಿಮ್ಮ ಸಭೆಯ ಠರಾವುಗಳನ್ನು ಜಾರಿಯಲ್ಲಿ ತರಬೇಕೆಂದು ಸೂಚಿಸಿರುತ್ತೇವೆ.

ಮತ್ತೊಂದೇನೆಂದರೆ—ಪ್ರತಿ ಗ್ರಾಮಗಳ ಮಠಾಧಿಕಾರಿಗಳು ತಮ್ಮ ಶಿಷ್ಯರಿಂದಲೂ ತಮ್ಮ ಧರ್ಮಾಧಿಕಾರವುಳ್ಳ ಗ್ರಾಮಗಳ ಭಕ್ತ

ರಿಂದಲೂ, ಮಾಹೇಶ್ವರರಿಂದಲೂ, ತಮ್ಮಿಂದಲೂ ತಮ್ಮ ತಮ್ಮ ಶಕ್ತ್ಯನುಸಾರ ಸದರಿ ವಾರದ ಪಾಠಶಾಲೆಯ ಸ್ಥಿರಫಂಡಿಗೆ ಹಣವನ್ನು ಶೇಖರಿಸುವ ಏರ್ಪಾಟು ಮಾಡಬೇಕೆಂದು ಅಪೇಕ್ಷಿಸುತ್ತೇವೆ.

ವೀರಶೈವ ಗರ್ಭಸಂಜನಿತರಾದ ವೀರಶೈವ ಮತೋದ್ಧಾರಕರಾದ ವಾರದ ಮಲ್ಲಪ್ಪನವರ ಮನೆಯ ಸಲುವಾಗಿ ಈ ಸಂಸ್ಕೃತ ಪಾಠಶಾಲೆಯನ್ನು ಸ್ಥಾಪಿಸದೆ ವೀರಶೈವ ಮತೋದ್ಧಾರದ ಸಲುವಾಗಿ ಸ್ಥಾಪಿಸಿದರೆಂಬುದು ಸ್ಪಷ್ಟವಾಗಿ ತೋರುತ್ತಲಿದೆ. ಮತ್ತು ಈ ಪಾಠಶಾಲೆಗೆ ತಮ್ಮ ಸಾಹಸವನ್ನು ಖರ್ಚುಮಾಡಿದವರ ನಾಮವಿದ್ದರೆ ವೀರಶೈವರಿಗೆ ಬಾಧಕವೇನೂ ಇಲ್ಲ ಅಂಥಾ ಮಹನೀಯರ ನಾಮೋಲ್ಲೇಖನದಿಂದ ಉತ್ತರೋತ್ತರ ಸಹಾಯಬುದ್ಧಿಗಳು ನಮ್ಮ ವೀರಶೈವರಲ್ಲಿ ಹುಟ್ಟುವದಕ್ಕೆ ಪ್ರೋತ್ಸಾಹವುಂಟಾಗುವುದರಿಂದ " ವಾರದ ವೀರಶೈವ ಸಂಸ್ಕೃತ ಪಾಠಶಾಲೆ " ಎಂಬ ನಾಮವನ್ನು ಸ್ಥಿರಗೊಳಿಸಿ, ಆನಂದದಿಂದ ಸರ್ವ ವೀರಶೈವರೂ, ವೀರಮಾಹೇಶ್ವರರೂ ಧನಧಾನ್ಯ ಸಹಾಯಗೊಳಿಸಿ ವೀರಶೈವ ಮತೋದ್ಧಾರಕವಾದ ಪುಣ್ಯಕೃತಿಗೆ ಪಾತ್ರರಾಗಿ ಧನ್ಯರಾಗಬೇಕೆಂದು ಸೂಚಿಸಿರುತ್ತೇವೆ.

ಥೋತ್ರೀ ಗ್ರಾಮದಲ್ಲಿ ನೆರವೇರುವ ಈ ಗುರುವರ್ಯಾಧಿವೇಶನದಲ್ಲಿ ಅಧ್ಯಕ್ಷಸ್ಥಾನವನ್ನು ಕೈಕೊಂಡಿರುವ ಶ್ರೀಗಂಗಾಧರಸ್ವಾಮಿ ಮಹಂತಿನಮಠ ಬೆಂಗಳೂರು ಇವರು ವೀರಶೈವ ಧರ್ಮೋನ್ನತಿಯನ್ನುಂಟುಮಾಡುವ ಸಲುವಾಗಿ ಶರೀರಾಯಾಸವನ್ನು ಲಕ್ಷಿಸದೆ ಶ್ರಮವಹಿಸಿದ್ದಕ್ಕಾಗಿ ಇವರಿಗೆ ಪರಶಿವನು ಸದಾಯುರಾರೋಗ್ಯಾದ್ಯಪಾರಭೂತಿಯನ್ನೂ ಶಿವಭಕ್ತಿ ಶಿವಜ್ಞಾನಗಳನ್ನೂ ಅನುಗ್ರಹಿಸಿ ಸುಖದಿಂದ ಸಂರಕ್ಷಿಸಲೆಂದು ಹಾರೈಸುತ್ತೇವೆ.

ಇಂಥ ವೀರಶೈವ ಮತೋನ್ನತಿಯ ಕಾರ್ಯದಲ್ಲಿ ಶ್ರದ್ಧೆಯುಳ್ಳವರಾಗಿ ಈ ಗುರುವರ್ಯಾಧಿವೇಶನದ [illegible]

ಖರ್ಚನ್ನು ವಹಿಸಿ ದೇಹಶ್ರಮವನ್ನು ಲಕ್ಷಿಸದೆ ಗುರು ಭಕ್ತಿಯಿಂದ ಅವಿಶ್ರಾಂತಶ್ರಮವನ್ನು ವಹಿಸಿದ ಥೋತ್ರೀ ಗ್ರಾಮದ ವೀರಶೈವ ಭಕ್ತ ಮಾಹೇಶ್ವರರಿಗೂ ತದನುಯಾಯಿಗಳಾದ ಸದ್ಭಕ್ತರಿಗೂ ಶ್ರೀಮದಷ್ಟಾವರಣವಾಸಿಯಾದ ಮಹಾಲಿಂಗವು ಪುತ್ರಪೌತ್ರಾದಿ ಸಕಲ ಸಂಪತ್ ಸಮೃದ್ಧಿಯನ್ನೂ ಶಿವಭಕ್ತಿಯನ್ನೂ ಕೊಟ್ಟು ಉದ್ಧರಿಸಲೆಂದು ಆಶೀರ್ವದಿಸುತ್ತೇವೆ.

ಇಂಥ ಪೂಜ್ಯವಾದ ಗುರುವರ್ಯಾಧಿವೇಶನಕ್ಕೆ ದೇಶ ದೇಶಗಳಿಂದಾಗಮಿಸಿರುವ ವೀರಶೈವ ಬಂಧುಭಗಿನಿಯರಿಗೆ ಪರಮೇಶ್ವರನು ಸದಾಯುರಾರೋಗ್ಯ ಸೌಭಾಗ್ಯಗಳನ್ನಿತ್ತು ಸಂರಕ್ಷಿಸಲೆಂದು ಆಶೀರ್ವದಿಸಿ ಈ ದೀರ್ಘವಾದ ಲೇಖವನ್ನು ವಿರಮಿಸುತ್ತೇವೆ.

ತಾ|| ೨೭-೩-೧೯೩೪ ಇತ್ಯಾಶೀಃ

ಮುಕ್ಕಾಂ ಮಂಗಳವೇಢೆ

---

|| ಶ್ರೀಜಗದ್ಗುರು ಪಂಚಾಚಾರ್ಯೇಭ್ಯೋನಮಃ ||

[ಮೊಹರು]

ಗೆ ಶಿ-ನಂಬರು ೨೬/೧೯೩೩

ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ
ಶ್ರೀ ೧೦೮ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ
ಮಹಾಸ್ವಾಮಿಗಳವರ ದಿವ್ಯಸನ್ನಿಧಿಯಿಂದ

ಶ್ರೀ ಗುರುಭಕ್ತಿಪರಾಯಣರಾದ ಮುಂಬಯಿ-ಮದ್ರಾಸ-ನಿಜಾಮು-ಮೈಸೂರು ಇಲಾಖೆಗಳಲ್ಲಿರುವ ಗುರುವರ್ಗದ ಪಟ್ಟಚರಾಧಿಕಾರಿಗಳು ವ ಮಠಾಧಿಕಾರಿಗಳಿಗೆ ಅಪ್ಪಣೆಕೊಡಿಸುವದೇನಂದರೆ— ಗುರುವರ್ಗದ

ಉದ್ಧಾರಕ್ಕಾಗಿ ಬೇಕಾಗಿರುವ ಪ್ರಿಂಟಿಂಗ್ ಪ್ರೆಸ್ ಮೊದಲಾದವುಗಳ ಬಗ್ಗೆ ಪ್ರತಿಯೊಬ್ಬರು ತಮ್ಮ ತಮ್ಮ ಶಕ್ತಿನಿೂರಿ ಸಹಾಯಮಾಡಿ ಕೀರ್ತಿಭಾಜನರಾಗತಕ್ಕದ್ದು. ಗುರುವರ್ಗದ ಅಭಿಮಾನಿಶಾಲಿಗಳಿಗೆ ಈ ವಿಷಯದಲ್ಲಿ ಹೆಚ್ಚಿಗೆ ಅಪ್ಪಣೆಕೊಡಿಸುವದೇನದೆ.

ಮುಕ್ಕಾಂ ಸೋಗಿ ತಾ|| ೨೮-೨-೧೯೨೩. ಸಹಿ

---

[ಮೊಹರು ಅದೆ]

ಶಿ-ಗೆ. ನಂಬರು ೪೮೩/೧೯೨೯

ಶ್ರೀಮದ್ವೇದಾಗಮೋಪನಿಷತ್ಪ್ರತಿಪಾದಿತ ವೀರಶೈವಮಹಾಮತ ಸ್ಥಾಪನಾಚಾರ್ಯ, ದುಷ್ಟಶಿಕ್ಷಣ ಶಿಷ್ಟರಕ್ಷಣಶೀಲ, ಶ್ರೀಮದುಜ್ಜಯಿನೀ ಮಹಾಕ್ಷೇತ್ರವಿದ್ಯೋತಮಾನವಟವೃಕ್ಷಸಿದ್ಧೇಶ್ವರಲಿಂಗಗರ್ಭಾವಿರ್ಭೂತ, ರಕ್ತಕಂಥಾತಾಮ್ರಕಮಂಡಲು ಪಲಾಶದಂಡ ವಿಭೂತಿಘುಟಿಕಾ ಭಿಕ್ಷಾ ಪಾತ್ರ ಪಂಚಮುದ್ರಾಮುದ್ರಿತ, ದಕ್ಷಿಣಕಲಶಾಧೀಶ್ವರ, ನಂದಿಗೋತ್ರಾ ಧಿನಾಥ, ಷಟ್ಸಹಸ್ರಚರಲಿಂಗಾಧ್ಯಕ್ಷ, ಸರ್ವತಂತ್ರಸ್ವತಂತ್ರ, ಶ್ರೀಮ ದುಜ್ಜಯಿನೀ ಸದ್ಧರ್ಮಸಿಂಹಾಸನಾಧೀಶ್ವರ, ಯಮಿಕುಲತಿಲಕ, ಶ್ರೀ ೧೦೮ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿನಾಂ ದಿವ್ಯಸನ್ನಿಧಾನೇನ—

ಶ್ರೀ ಸದ್ಗುರುಪದನಖಚಂದ್ರಸಾಂದ್ರರುಚಿರುಂದ್ರಚಂದ್ರಿಕಾ ಚಂಚಚ್ಚಕೋರಾಯಮಾನರಾದ ನೈಜಾಮು ಇಲಾಖಾ ಕುಷ್ಟಿಗಿ ತಾ|| ಪುರಗಿರಿ ಕಡೂರು ಅಂಟರಠಾಣಾ ಯರೇಗೋನಾಳು ಗ್ರಾಮಗಳ ಹಿರೇಮಠದ ಶ್ರೀಗುರುಪಟ್ಟಾಧೀಶ ಗುರುಸ್ಥಲಾಭಿವೃದ್ಧಿಕಾಂಕ್ಷಿ ಪಂಡಿತ ವ್ಯಾಕರಣರತ್ನ ಚಿದ್ಘನಶಿವಾಚಾರ್ಯರು ಶ್ರೀಕ್ಷೇತ್ರಕಾಶೀ ಜಗದ್ಗುರು ವಿಶ್ವಾರಾಧ್ಯ ಗುರುಕುಲವಾಸಿಗಳಾಗಿ ವ್ಯಾಕರಣ ನ್ಯಾಯಶಾಸ್ತ್ರಗಳಲ್ಲಿ

ಕಲಕತ್ತಾ ಕಾಶೀ ಪಂಡಿತಪರೀಕ್ಷೋತ್ತೀರ್ಣರಾಗಿರುವರಲ್ಲದೆ, ಸಾಹಿತ್ಯದಲ್ಲಿಯೂ ಕೋವಿದರಾಗಿ ಶ್ರೀ ವೀರಶೈವಮತೀಯ ಸಿದ್ಧಾಂತಶಾಸ್ತ್ರವನ್ನು ಚನ್ನಾಗಿ ಪರಿಶೀಲಿಸಿ ವೈದುಷ್ಯ ಸಂಪಾದನವನ್ನು ಮಾಡಿಕೊಂಡಿರುವದರಿಂದ ಈ ಪಂಡಿತರಿಗೆ "ಶಿವಸಿದ್ಧಾಂತತತ್ವಜ್ಞ" ಎಂಬ ಪದವಿಯನ್ನು ಸಂತೋಷಚಿತ್ತದಿಂದ ಪ್ರದಾನಮಾಡಿದ್ದಾಗಿದೆ. ಏತತ್ಪದ ವೀಭೂಷಿತರಾದ ಇವರು ಶ್ರೀಗುರುಪೀಠಗಳಲ್ಲಿ ಧಾರ್ಮಿಕಸಿದ್ಧಾಂತವನ್ನು ವಾದವಿವಾದ ಪೂರ್ವಕ ನಿರ್ಣಯಿಸುವ ಪಂಡಿತೋತ್ತಮರಾಗಿ ಗಣಿಸಲ್ಪಟ್ಟಿದ್ದಾರೆ.

ಇತಿ ಶಿವಂಭೂಯಾತ್

ಮುಕ್ಕಾಂ ಜಗಲೂರು,
ತಾ|| ೧೦-೧-೧೯೨೯. (ಸಹಿ ಅದೆ)

---

## ಉಜ್ಜಯಿನೀ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರ ವಿಜಯಯಾತ್ರಾ

ರಂಭಾಪುರೀ ಪೀಠವೂ ಉಜ್ಜಯಿನೀ ಪೀಠವೂ ಕರ್ಣಾಟಕ ಪ್ರಾಂತದಲ್ಲಿ ವಿರಾಜಿಸುತ್ತಿರುವುದು ಸರ್ವಶೃತವಷ್ಟೆ! ತದ್ವತ್ ಶ್ರೀ ರೇವಣಸಿದ್ಧ ಶ್ರೀ ಮರುಳಸಿದ್ಧ ಮಹಾಚಾರ್ಯರ ಪರಸ್ಪರ ಸಂಬಂಧವು ಅನೇಕ ಗ್ರಂಥಾಧಾರದಿಂದ ತಿಳಿದುಬರುತ್ತದೆ.

ಶ್ರೀಮತ್ಸರ್ವಕಲಾಸುಕೋವಿದತಮಃ ಪ್ರಾಲೇಯಶೈಲಾತ್ಮಜಾ
ಜಾನೇಃ ಪೂರ್ಣಕೃಪಾವಿಶೇಷ ನಿಚಯ ಪ್ರಜ್ಞಾನಧೀರ್ಯೋ
ಬಭೌ ।
ಸಮ್ಯಗ್ರೇವಣದೇಶಿಕೇಂದ್ರಧೃತಷಡ್ಲಿಂಗಾವಧಾನೋಜ್ವಲಂ
ಸಿದ್ಧಾರ್ಯಂ ಮರುಲಪ್ರಭುಂ ಬುಧನುತಂ ತಂ ಮನ್ಮಹೇ
ಶ್ರೇಯಸೇ ||೭||
(ಶ್ರೀಕರಭಾಷ್ಯ-ಗುರುಪರಂಪರಾ)

ಶ್ರೀ ಪಾರ್ವತೀಪತಿ ಪರಮೇಶ್ವರನ ಪೂರ್ಣ ಕೃಪಾವಿಶೇಷದಿಂದ ಪ್ರಫುಲ್ಲಿತ ಪ್ರಜ್ಞನಾದ ಸರ್ವಕಲಾಕೋವಿದತಮ-ಶ್ರೀಜಗದ್ಗುರು ಮರುಲಸಿದ್ಧದೇಶಿಕೇಂದ್ರಶಿವಾಚಾರ್ಯನು ಶ್ರೀಜಗದ್ಗುರು ರೇವಣಸಿದ್ಧ ದೇಶಿಕೇಂದ್ರಶಿವಾಚಾರ್ಯನಿಂದ ಷಡ್ಲಿಂಗಾವಧಾನಬೋಧವನ್ನು ಗ್ರಹಿಸಿದ ವಾರ್ತೆಯು ಶ್ರೀಪತಿಪಂತಾರಾಧ್ಯ ಭಗವತ್ಪಾದರಿಂದ ಸಂಸ್ತುತವಾಗಿದ್ದು ಪರಸ್ಪರ ಪೀಠಗಳಲ್ಲಿ ನಡೆದಿರುವ ಪ್ರಾಚೀನಾರ್ವಾಚೀನ ಪಟ್ಟಾಧಿಕಾರ ಪ್ರಸಂಗದ ಕಾಗದ ಪತ್ರಗಳಿಂದ ಕಂಡುಬರುತ್ತದೆ.

ಶ್ರೀ ರಂಭಾಪುರೀ ಜಗದ್ಗುರು ಪಂಚಾಕ್ಷರಶಿವಾಚಾರ್ಯ ಮಹಾಸ್ವಾಮಿಗಳು ತಮ್ಮ ಜೀವಿತಕಾಲದಲ್ಲಿ ಪೀಠದ ಪದ್ಧತಿಯಂತೆ ಉತ್ತರಾಧಿಕಾರವನ್ನು ಪ್ರದಾನಮಾಡದೆ ಅಕಸ್ಮಾತ್ ತಾ॥ ೮-೨-೧೯೨೨ ನೆಯ ಇಸವಿ ದಿವಸ ಲಿಂಗೈಕ್ಯರಾಗಲಾಗಿ ಪೀಠವು ಅನಾಯಕವಾಯಿತು. ಈ ಕಠಿಣ ಪ್ರಸಂಗದಲ್ಲಿ ಪೀಠದ ಅತಿ ಸಮೀಪದಲ್ಲಿರುವ ನರಸಿಂಹರಾಜಪುರದ ಮ॥ ರಾ॥ ಶ್ರೀ ಇ. ನಿ. ಶಾಂತಪ್ಪ ಶೆಟ್ಟಿ ಮಹೋದಯರೂ ಬೀರೂರು ಮ॥ ರಾ॥ ಶ್ರೀ ಪತ್ರೀ ಚನ್ನವೀರಪ್ಪಯ್ಯನವರೂ ಮ॥ ರಾ॥ ಶ್ರೀ ಮುನಸಿ ಮರುಳಸಿದ್ಧಯ್ಯನವರೂ ಹೊಳಿಹೊನ್ನೂರು ಶ್ರೀಪಟ್ಟಾಧ್ಯಕ್ಷರೂ ಮುಂತಾದ ವೀರಶೈವ ಮಹಾಜನರು ಶ್ರೀಮದುಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳ ಸನ್ನಿಧಿಗೆ ಬಂದು ಶ್ರೀ ರಂಭಾಪುರೀ ಪೀಠದ ನೂತನ ಪಟ್ಟಾಧಿಕಾರ ಮಹೋತ್ಸವಕ್ಕೋಸ್ಕರ ಆಮಂತ್ರಣ ಮಾಡಿಕೊಂಡರು. ಆ ಮಹಾಜನರ ಪ್ರಾರ್ಥನೆಯ ಮೇರೆಗೆ ಶ್ರೀ ಭಗವತ್ಪಾದರ ವಿಜಯಯಾತ್ರೆಯು ನಡೆಯಿತು.

ಶ್ರೀಜಗದ್ಗುರು ಸಿದ್ಧಲಿಂಗಶಿವಯೋಗೀಶ್ವರರು ಸರ್ವದಾ ಏಕಾಂತಪ್ರಿಯರೂ ಮತ್ತು ಶಿವಪೂಜಾಲೋಲರೂ ಆಗಿದ್ದರಿಂದ ಮಾರ್ಗದಲ್ಲಿ ಪರಿಶೋಭಿಸುತ್ತಿರುವ ತುಂಗಾ-ಭದ್ರಾ ನದೀತೀರಗಳಲ್ಲಿ

ವಿರಾಜಿಸುವ ಮನೋಹರ ವನಪ್ರದೇಶಗಳಲ್ಲಿ ಪರಮಶಿವಾರ್ಚನೆಯನ್ನು ಪರಮಾನಂದಪೂರ್ವಕ ನಡೆಸುತ್ತ ಒಂದಾನೊಂದು ಕಡೆಯಲ್ಲಿ ಅತಿ ವೈರಾಗ್ಯವಶಾತ್

ಅರಣ್ಯಗಿರಿಗುಹಾಪುಲನಾದಿಷು ಯೋಗಾಭ್ಯಾಸೋಪದೇಶಃ ।
(ನ್ಯಾಯದರ್ಶನ)

ಹೀಗೆಂದು ಗೌತಮಮುನಿವರರು ಸೂಚಿಸಿದ ರೀತ್ಯಾ ಬುಕ್ಕಾಂಬುಧಿ ಗಿರಿಗುಹೆಯಲ್ಲಿ ನಿವಾಸಮಾಡಿ,

ಗುರುಶಂಭುಲಿಂಗದರ್ಚನೆಯನು ಸಂಧಾನ ವರವಿದ್ಯಾಭಕ್ತಿ
ಸುವ್ರತವೈದು ।
ನಿರುತದಿಂದಳವಟ್ಟುದನೆ ಶಿವಯೋಗವೆಂದೊರೆವರೊಲಿದು
ವೇದವಿದುಗಳು ॥
(ಕೈವಲ್ಯಪದ್ಧತಿ)

ಶಿವಾರ್ಚನ ಶಿವಧ್ಯಾನ ಶಿವಜ್ಞಾನ ಶಿವಭಕ್ತಿ ಮತ್ತು ಶಿವವ್ರತಗಳಿಂದ ಪರಿಪೂರ್ಣವಾದುದಕ್ಕೆ ಶಿವಯೋಗವೆಂದು ವೇದವೇತ್ತೃಗಳು ಹೇಳುವ ಪರಿಯನ್ನು ಶ್ರೀ ನಿಜಗುಣಶಿವಯೋಗೀಶ್ವರರು ಪೇಳ್ದಂತೆ ಶಿವಾರ್ಚನರೂಪ ಮಹಾತಪಸ್ಸನ್ನು ಮಾಡಿದರು. ಈ ಅರ್ಥವು "ಉಪಾಸನಾಪರ್ಯಾಯೋ ಯೋಗಃ" ಎಂದು ದೈವೀಮೀಮಾಂಸಾ ಸೂತ್ರದಲ್ಲಿ ಸೂಚಿತವಾಗಿರುತ್ತದೆ.

॥ ಜೀವನ್ಮುಕ್ತಲಕ್ಷಣ ॥

"ಶಿರೋವ್ರತ, ಪಾಶುಪತವ್ರತ, ಶಾಂಭವವ್ರತ, ಶಿವವ್ರತ, ಅತ್ಯಾಶ್ರಮ ಎಂಬೀ ಪರ್ಯಾಯವಾಚಕ ನಿಗಮಾಗಮಪುರಾಣಪ್ರಸಿದ್ಧ ವ್ರತಪರನಾಗಿ ಬಿಲ್ವದಲಗಳಿಂದ ತ್ರಿಕಾಲ ನಿಯಮಪೂರ್ವಕವಾಡುವ ಶಿವಾರ್ಚನೆಯು ತಪಸ್ಸೆಂದು ಖ್ಯಾತವಾಗಿದೆ. "ನಿಧನಪತಯೇನಮಃ" ಇತ್ಯಾದಿ ಮಂತ್ರಗಳಿಂದ ಶಿವಾರ್ಚನಮಾಡುವವನು ಶಿವಸಾಯುಜ್ಯ

ವನ್ನು ಪಡೆಯುವನು. ಹೃದಯುದಲ್ಲಿ ಶಿವಧ್ಯಾನ, ಭಸ್ಮೋದ್ಧೂಲನ, ಭಸ್ಮಧಾರಣ, ರುದ್ರಾಕ್ಷಧಾರಣ, ಪಂಚಾಕ್ಷರ ಮಂತ್ರಜಪ, ಅವಿಚ್ಛಿನ್ನ ರುದ್ರಾಭಿಷೇಕ ಮಾಡುವವನೂ ಮತ್ತು ಶಿವನಿಗೆ ಕರ್ಪೂರ ಅಗರು ಕಸ್ತೂರಿ ಕೇಸರಿ ಚಂದನ ಕಾಲಾಗರು ಗುಗ್ಗಲಧೂಪ, ಆಜ್ಯ ಪೂರ್ಣದೀಪಾವಲಿ, ಗೋಘೃತಶರ್ಕರಾಮಿಶ್ರಿತಕ್ಷೀರಾನ್ನ ಇವುಗಳನ್ನು ಸಮರ್ಪಿಸುವವನೂ ಮತ್ತು ಸಾದರ ಪ್ರದಕ್ಷಿಣ-ಪ್ರಣಾಮಗಳನ್ನು ಮಾಡುವವನೂ ಪ್ರತಿಕಬಲಕಾಲದಲ್ಲಿ ಶಿವಲಿಂಗಸ್ಮರಣ ಮಾಡುವವನೂ ಹೋಗುವಾಗ ನಿಂತಾಗ ಕುಂತಾಗ ಮಲಗಿದಾಗ ಶಿವಕೀರ್ತನವನ್ನು ಮಾಡುವವನೂ ರತ್ನವದ್ ಭಸ್ಮರುದ್ರಾಕ್ಷ ಸಂಗ್ರಹಗಳನ್ನು ಮಾಡುವವನೂ ಜೀವನ್ಮುಕ್ತನು ''

(ಶಿವರಹಸ್ಯ ಅಂಶ ೭-೮-೨೪)

ಎಂಬ ಆರ್ಷವಚನಾನುಗುಣವಾಗಿ ಸರ್ವದಾ ಶಿವಪೂಜಾಪರಾಯಣರಾದ ಶ್ರೀ ಶಿವಯೋಗೀಶ್ವರರು ಜೀವನ್ಮುಕ್ತರಾಗಿ ಪರಿಶೋಭಿಸುತ್ತ ಮಹಾಸಿದ್ಧರೆಂದು ಪ್ರಸಿದ್ಧರಾಗಿದ್ದರು.

ಅಹಿಂಸಾಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ ।

(ಯೋಗದರ್ಶನ)

ಈ ಸೂತ್ರಸೂಚಿತ ರೀತ್ಯಾ ಶ್ರೀಜಗದ್ಗುರು ಸಿದ್ಧಲಿಂಗಶಿವಯೋಗೀಶ್ವರರ ಸನ್ನಿಧಿಯಲ್ಲಿ ಅಹಿನಕಲುಗಳೂ ಗೋವ್ಯಾಘ್ರಗಳೂ ಸಹ ನಿರ್ವೈರದಿಂದ ನಿವಾಸಮಾಡುತ್ತಿದ್ದವು. ಇಂತು ಬುಕ್ಕಾಂಬುಧಿ ಗಿರಿಗುಹಾನಿವಾಸಿಗಳಾದ ಈ ಮಹಾತ್ಮರ ತಪಃಪ್ರಭಾವವು ವಿಶ್ವತೋವಿಸ್ತೃತವಾಯಿತು.

ಅಷ್ಟರಲ್ಲಿಯೇ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರಿಗೆ ಮೈಸೂರು ರಾಜ್ಯದಲ್ಲಿ ಸಂಚಾರಮಾಡುವುದಕ್ಕಾಗಿ ಸರ್ಕಾರದಿಂದ ರಹದಾರಿಯು ಕೊಡಲ್ಪಟ್ಟಿತು.

## ರಹದಾರಿ ಹುಕುಮಿನ ನಕಲು

Office of the
Muzarai Commissioner
in Mysore
R. Dis No. 4 of
1925 - 26
II June 1925

### ಮೈಸೂರು ಸೀಮೆಯ ಮುಜರಾಯಿ ಕಮಿಶನ್‌ರವರ ಕಚೇರಿಯಿಂದಾ—

ಮೈಸೂರುಸೀಮೆಯ ಎಲ್ಲಾ ತಾಲೂಕು ಅಮಲ್ದಾರರಿಗೂ ಮತ್ತು ಡೆಪ್ಯುಟಿ ಅಮಲ್ದಾರರಿಗೂ ಬರೆಯಿಸಿ ಕಳುಹಿಸಿದ ನಿರೂಪು ಅದಾಗಿ—

ಬಳ್ಳಾರಿ ಜಿಲ್ಲಾ ಕೂಡ್ಲಿಗಿ ತಾಲೂಕು ಉಜ್ಜಯಿನಿ ಸದ್ಧರ್ಮ ಸಿಂಹಾಸನ ಮಠದ ಚರಪಟ್ಟಾಧ್ಯಕ್ಷ ಶ್ರೀಸಿದ್ಧಲಿಂಗಶಿವಾಚಾರ್ಯ ಸ್ವಾಮಿಗಳವರು ಮೈಸೂರು ಸೀಮೆಯಲ್ಲಿ ವೀರಶೈವ ಮತದ ಆಚಾರ ವಿಚಾರ ಮತ್ತು ಶಿಷ್ಯಾರ್ಜನೆ ಉದ್ದಿಶ್ಯ ಸಂಚಾರಮಾಡುವದರಿಂದ ಸದರಿ ಸ್ವಾಮಿಗಳವರು ನಿಮ್ಮ ನಿಮ್ಮ ಗಡಿಗಳ ಮಾರ್ಗವಾಗಿ ಬಂದಲ್ಲಿ ಉಕ್ಕಡ ಕಣಿವೆಗಳಲ್ಲಿ ಅಟಕಾಯಿಸದೆ ಬಿಟ್ಟುಬಿಡುವುದು ಮತ್ತು ಗುರುಗಳಿಗೂ ಇವರ ಪರಿವಾರಕ್ಕೂ ಸಹ ಜನಗಳಿಂದ ಸರಬರಾಯಿ ಆದ ಜೀನಸುಗಳಿಗೆ ವಾಜಬಿ ಕ್ರಯ ಕೊಡಿಸಿಕೊಡತಕ್ಕದ್ದಲ್ಲದೆ ಖೈದುವಾರು ಜಾಗದಲ್ಲಿ ಇಳಿಸಿ ರಾತ್ರಿ ವೇಳೆ ಕಳ್ಳಕಾಕರ ಉಪದ್ರವವಿಲ್ಲದಂತೆ ಉಸ್ತುವಾರಿ ಮಾಡಿಸಿ ದರಮುಜಲಿನಲ್ಲಿಯೂ ಮರ್ಯಾದೆಯಿಂದ ನಡೆದುಕೊಂಡು ಬರುವದು.

ಇವರ ಮರಹ ಈ ಕೆಳಗೆ ನಮೂದಿಸಿರುವಂತೆ ಬಿರುದುಬಾವಲಿಗಳು ಇರುತ್ತಾಗಿ ನಿಮ್ಮ ನಿಮ್ಮ ಸರಹದ್ದುಗಳಲ್ಲಿ ತಡೆಯದೆ ಬಿಟ್ಟುಬಿಡುವುದು.

ಪಾಲಕಿ ೨, ಮೇನ ೧, ಮಕರ ತೋರಣ, ಹಗಲು ದೀವಟಿಗೆ,

ಚಾಮರ ಮತ್ತು ಮೂರ್ಚಾಲು ೪, ವಾಲುಗಳು ೨, ಬಿಳೀ ಮತ್ತು ಕೆಂಪು ಚತ್ರಿ ೨, ಭೂಚಕ್ರದ ಕೊಡೆ ೨, ಅಪ್ತಗಿರಿ ೨, ಪಂಚದೀವಟಗೆ ೨, ಬೆಳ್ಳಿ ಬೆತ್ತ ೨, ಬೆಳ್ಳಿ ಚೊಟ ೨, ಭಲ್ಲೆ ಮತ್ತು ಗಗ್ಗರಿ ಕಟ್ಟಿಗೆ ೪, ಕಾವಿ ನಿಶಾನಿ ೨, ತ್ರಿಶೂಲ, ನಂದಿಧ್ವಜ, ನಿಸಾನಿ ಸಹಿತ ಆನೆ ೨, ಕುದುರೆ ಮೇಲೆ ಡಂಕ, ಭೇರಿ, ಕಹಳೆ, ಕರ್ನೆ, ನಫೂರಿ, ನಗಾರಿ, ಜಾಗಟೆ, ಘಂಟೆ ೨, ಸೂರ್ಯವಾದ್ಯ ಚಂದ್ರವಾದ್ಯ ವಗೈರೆ, ನಾನಾತರಹದ ವಾದ್ಯಗಳು, ರಥ ೧, ಕುದುರೆ ೪, ಗೋವು ೮, ಎತ್ತು ೧೦, ಬಂದೂಕ ೨, ಹತ್ಯಾರು ೪, ಭೋವಿಯವರು ೮, ಬಿಲ್ಲೇ ಜವಾನರು ೧೨, ಪೌಜುದಾರರು ೨, ಚಡಿಯವರು ೮, ಪಂಡಿತರು ೪, ವೇದಘೋಷಕರು ೪, ಅಂಗರಕ್ಷಕರು ೪, ಇತರ ಸಿಬ್ಬಂದಿ ಜನ ೩೦.

ಬೆಂಗಳೂರು,
೧೧-೬-೧೯೨೫.

(Sd.) ಸಿ. ಎಸ್. ಬಾಲಸುಂದರಂ ಐಯ್ಯರ್,
ಮುಜರಾಯಿ ಕಮಿಶನರ್.



ಇತ್ತ ಶ್ರೀರಂಭಾಪುರೀ ಮಹಾಸಂಸ್ಥಾನದ ಮಠದಲ್ಲಿ ನೂತನ ಪಟ್ಟಾಧಿಕಾರ ಮಹೋತ್ಸವದ ಸರ್ವಸಿದ್ಧತೆಯಾಗಿ ಆವಾಹನಪತ್ರಿಕೆಯು ಪ್ರಸಿದ್ಧವಾಯಿತು.

॥ ಶ್ರೀ ಜಗದ್ಗುರು ರೇಣುಕಾಚಾರ್ಯಃ ಪ್ರಸೀದತು ॥

## ಶ್ರೀ ಜಗದ್ಗುರು ರೇಣುಕಾಚಾರ್ಯ ಪೀಠದ ಪಟ್ಟಾಭಿಷೇಕ ಮಹೋತ್ಸವಾಹ್ವಾನ ಪತ್ರಿಕಾ

............ಗ್ರಾಮದ ಶ್ರೀ ಪಟ್ಟ-ಚರಾಧಿಕಾರಿಗಳು, ಮಠಸ್ಥರು, ಶೆಟ್ಟರು, ಯಜಮಾನರು, ದೇಸಾಯರು, ದೇಶಪಾಂಡೆಯರು, ಗೌಡರು, ನಾಡಗೌಡರು, ಬಣಕಾರರು, ಬುದ್ಧಿವಂತರು ಮುಂತಾದ ವೀರಶೈವ ಮಹಾಜನರಿಗೆ ಕುಶಲಪೂರ್ವಕ ಶ್ರುತಪಡಿಸುವದೇನಂದರೆ—

ಯುಗ ಯುಗಾಂತರಗಳಲ್ಲಿ ಶ್ರೀ ಸೋಮನಾಥಲಿಂಗದಿಂದ ವತರಿಸಿ ಭೂಮಂಡಲದಲ್ಲಿ ವೀರಶೈವ ಸಿದ್ಧಾಂತವನ್ನು ಸ್ಥಾಪಿಸಿದ ಶ್ರೀ ಜಗದ್ಗುರು ರೇಣುಕಾಚಾರ್ಯರು ವೀರಶೈವ ಮತದ ದೀಕ್ಷಾ-ಶಿಕ್ಷಾ-ಮೋಕ್ಷಾದಿಗಳ ಬಗ್ಗೆ ಮಲಯಾದ್ರಿ ಮಧ್ಯ ವಿದ್ಯೋತಮಾನ ಶ್ರೀಮದ್ರಂಭಾಪುರೀ ಮಹಾಕ್ಷೇತ್ರದಲ್ಲಿ ಧರ್ಮಪೀಠವನ್ನು ಸ್ಥಾಪಿಸಿರುವ ವಿಷಯವು ಶಾಸ್ತ್ರಪ್ರಸಿದ್ಧವೂ, ಲೋಕ ಪ್ರಸಿದ್ಧವೂ ಆದೆ. ಸದ್ಯಃ ಈ ಮಹಾಪೀಠದ ಉತ್ತರಾಧಿಕಾರವು ಪರಮ ತಪಸ್ವಿಗಳಾದ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಶ್ರೀಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ಅನುಗ್ರಹಿಸಲ್ಪಡತಕ್ಕದ್ದಾಗಿದೆ. ಇಂಥ ಜಗತ್ಪೂಜ್ಯವಾದ ಧರ್ಮಪೀಠಕ್ಕೆ ಸಾಕ್ಷಾದ್ಧರ್ಮಾವತಾರಿಗಳಾದ ನಮ್ಮ ಶ್ರೀಮನ್ಮಹಾರಾಜರವರು ಕಮಿಟಿಯ ಏರ್ಪಾಟಿನ ಮೇರೆಗೆ ವ್ಯಾಕರಣತೀರ್ಥ, ವಿದ್ಯಾಭೂಷಣ ಬಿರುದಾಂಕಿತರಾದ ಪಂ|| ಶ್ರೀ ಸದಾಶಿವಸಾಸ್ತ್ರಿಗಳವರನ್ನು ಪಟ್ಟಾಧಿಕಾರಿಗಳನ್ನಾಗಿ ಮಾಡಲಿಕ್ಕೆ ಮಂಗಲಕರವಾದ ಹುಕುಮನ್ನು ದಯಪಾಲಿಸಿದ್ದಾರೆ. ಈ ಪಟ್ಟಾಭಿಷೇಕ ಮಹೋತ್ಸವ ಕಾರ್ಯವು ಇದೇ ಕ್ರೋಧನನಾಮ ಸಂವತ್ಸರ ಮಾರ್ಗಶೀರ್ಷ ಶು. ೭ ಬಾನುವಾರ ಪ್ರಾತಃಕಾಲ ೮ ಘಂಟೆ, ೪೫ ನಿಮಿಷಕ್ಕೆ ಸಲ್ಲುವ ಧನುರ್ಲಗ್ನ ಶುಭಾಂಶದಲ್ಲಿ ತಾ. ೨೨-೧೧-೧೯೨೫ ರಲ್ಲಿ ನೆರವೇರುವಂತೆ ನಿಶ್ಚಯಿಸಲ್ಪಟ್ಟಿರುತ್ತದೆ. ಈ ಮಹಾಕಾರ್ಯಕ್ಕೆ ತಾವು ತಮ್ಮ ಸಕಲ ಪರಿವಾರದೊಡನೆ ಭಕ್ತಿಪೂರ್ವಕವಾಗಿ ಆಗಮಿಸಿ, ಜಗದಾಚಾರ್ಯರ ಕೃಪೆಗೆ ಪಾತ್ರರಾಗಬೇಕೆಂದೂ, ಸಾಕ್ಷಾದ್ಭೂಕೈಲಾಸದಂತೊಪ್ಪುತ್ತಿರುವ ಶ್ರೀ ರೇಣುಕಾಶ್ರಮದ ದರ್ಶನ-ವಾಸಾದಿಗಳಿಂದ ಭವತಾಪವನ್ನು ದೂರಮಾಡಿಕೊಳ್ಳಬೇಕೆಂದೂ ಹಾರೈಸುತ್ತೇನೆ.—

ಶಿವಂಭೂಯಾತ್ !

ತಾ|| ೨೮-೧೦-೧೯೨೫.
ಟೆಲಿಗ್ರಾಫ್ ಅಂಡ್ ಪೋಷ್ಟ್ :
ಬಾಳೇಹೊನ್ನೂರು, ಡಿ. ಕಡೂರು.

ಶ್ರೀಮದ್ರಂಭಾಪುರೀ ಮಹಾಸಂಸ್ಥಾನದ
ಏಜಂಟ್
ಯಸ್. ಕೆ. ಯಂ. ರುದ್ರಾರಾಧ್ಯ.

ಈಮೇರೆಗೆ ಪ್ರಕಟಿತವಾದ ಪಸಿದ್ಧ ಪತ್ರಿಕೆಗಳದ್ವಾರಾ ಆಮಂತ್ರಿತವಾದ ಮಹಾಜನರ ಗುಂಪು ಆ ಮಲಯಾಚಲ ಮಧ್ಯ ಸಘನವನದಲ್ಲಿ ವಿರಾಜಿಸುವ ಬಾಳೇಹೊನ್ನೂರ ಶ್ರೀ ರೇಣುಕರ ಮಹಾಕ್ಷೇತ್ರಕ್ಕೆ ನಾಲ್ಕೂ ದಿಕ್ಕುಗಳಿಂದಲೂ ಮೇರೆದಪ್ಪಿ ಕೂಡಿತು.

ಬುಕ್ಕಾಂಬುಧಿ ಗಿರಿ ಗುಹೆಯಲ್ಲಿ ಶಿವಯೋಗಪರಾಯಣರಾದ ಪರಮತಪೋನಿಧಿ ಗುರುಕುಲಸಾರ್ವಭೌಮ ಸಿದ್ಧಗಣಚಕ್ರವರ್ತಿ ಪ್ರಮಥಗಣವೃಂದವರೇಣ್ಯ ಮಂಗಲ ಗುಣಗಣರತ್ನಾಕರ ಮಹಾಶಿವಯೋಗೀಶ್ವರ ಶ್ರೀ ೧೦೮ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರು ಬುಕ್ಕಾಂಬುಧಿ ಗಿರಿಗುಹಾಶ್ರಮದಿಂದ ಮಲಯಾಚಲಮಧ್ಯ ವಿದ್ಯೋತಮಾನ ಶ್ರೀ ಜಗದ್ಗುರು ರೇಣುಕಭಗವತ್ಪಾದರ ಪುಣ್ಯಾಶ್ರಮವಾದ ರಂಭಾಪುರೀ ಮಹಾಸಂಸ್ಥಾನಮಠದ ಏಜೆಂಟ್. ಎಸ್. ಕೆ. ಶ್ರೀ ರುದ್ರಾರಾಧ್ಯರ ಆಮಂತ್ರಣದ ಮೇರೆಗೆ ಶ್ರೀ ಪಟ್ಟಾಧಿಕಾರಮಹೋತ್ಸವಕ್ಕೋಸ್ಕರ ಶೃಂಗರಿಸಲ್ಪಟ್ಟ ಮಠಕ್ಕೆ ಆಗಮಿಸಿ ರಂಭಾಸ್ತಂಭಗಳಿಂದಲೂ ತಳಿರುತೋರಣಗಳಿಂದಲೂ ನಾನಾವರ್ಣ ಧ್ವಜಾವಲಿಯಿಂದಲೂ ಸಮಸ್ತಭಾರತದ ನಾನಾಭಾಗಗಳಿಂದ ಆಗಮಿಸಿದ ವೀರಶೈವ ಮಹಾಜನಸ್ತೋಮದಿಂದಲೂ ಸುಮಂಗಲೆಯರ ಮಂಗಲಾರತಿಗಳಿಂದಲೂ ಗಜತುರಗ ಪದಾತಿ ಗಣಾವಲಿಗಳಿಂದಲೂ ಅಂಬಾರಿಗಳಿಂದ ವಿರಾಜಿಸುವ ಗಜರಾಜಗಣಾವಲಿಯಿಂದಲೂ ನಾನಾವಿಧವಾದ್ಯವೈಭವಗಳಿಂದಲೂ ವೀರಮಾಹೇಶ್ವರ ಗಣಪುಂಗವರಿಂದಲೂ ವಿಖ್ಯಾತವೀರಶೈವ ವಿದ್ವದ್ವೃಂದದಿಂದಲೂ ಲಕ್ಷಾಧೀಶ ಕೋಟ್ಯಧೀಶ ಶ್ರೀಮಂತರಿಂದಲೂ ಧೀಮಂತರಿಂದಲೂ ಶೆಟ್ಟಿ ಪಟ್ಟಣಶೆಟ್ಟಿ ಗೌಡ ಶಾನಬೋಗ, ನಾಡಗೌಡ ದೇಸಾಯಿ ದೇಶಪಾಂಡೆ ಮುಂತಾದ ಪುರಪಂಚರಿಂದಲೂ ಚಿಕ್ಕಮಠ ಹಿರಿಯಮಠಗಳ ಅಧ್ಯಕ್ಷರಿಂದಲೂ ಮಠಮಠಪತ್ತಿ ಗಣಾಚಾರಿ ಕುಮಾರ ಸ್ಥಾವರ ಇತ್ಯಾದಿ ಉಪಾಚಾರ್ಯ

ರಿಂದಲೂ ಮೈಸೂರು ರಾಜಧಾನಿಯಿಂದ ಬಂದ ರಾಜಾಧಿಕಾರಿ ಗಣದಿಂದಲೂ ರಿಜರ್ವ ಪೋಲೀಸ ಗಣದಿಂದಲೂ ದ್ವಿಶತ ಪೋಲೀಸ ಪಾರ್ಟಿಯಿಂದಲೂ ಸಬ್-ಇನಸ್ಪೇಕ್ಟರ ಇನ್‌ಸ್ಪೇಕ್ಟರ ಮೊದಲಾದ ಸಿಬ್ಬಂದಿಯಿಂದಲೂ ಕಡೂರು ಡಿ|| ಡೆಪ್ಯುಟಿ ಕಮೀಷನರ್ ಬಾಲಸುಂದರ ಅಯ್ಯರವರಿಂದಲೂ ರಾಜಸಭಾಭೂಷಣ ದಿವಾನಬಹಾದ್ದೂರ ಸರ್ ಕೆ. ಪಿ. ಪುಟ್ಟಣ್ಣಶೆಟ್ಟರಿಂದಲೂ, ರಿ|| ಹೈಕೋರ್ಟ ಚೀಫ್ ಜಸ್ಟೀಸ್ ಪಿ. ಮಹಾದೇವಯ್ಯನವರಿಂದಲೂ, ಬಳ್ಳಾರಿ ಡಿಸ್ಟ್ರಿಕ್ಟ್ ಕೊಟ್ಟೂರು ಮಿ|| ಮಠದ ಜಾಗಟಗೇರಿ ದೊಡ್ಡವೀರಪ್ಪಯ್ಯನವರಿಂದಲೂ ದಾವಣಗೇರಿ ಮಾಗಾನಹಳ್ಳಿ ಷಡಕ್ಷರಪ್ಪನವರಿಂದಲೂ, ಧಾರವಾಡ ಡಿ|| ರಿ|| ಡೆಪ್ಯುಟಿಕಲೆಕ್ಟರ ದಿವಾನಬಹದ್ದೂರ ಮೆಣಸಿನಕಾಯಿ ಶಾಂತವೀರಪ್ಪನವರಿಂದಲೂ, ಬೀರೂರಪುರದ ದೊಡ್ಡಮನೆ ಶ್ರೀ ಹಾಲಪ್ಪನವರಿಂದಲೂ ಪತ್ರೆ ಶ್ರೀ ಚನ್ನವೀರಪ್ಪನವರಿಂದಲೂ ನರಸಿಂಹರಾಜಪುರದ ಇಂ. ನಿ. ಶಾಂತಪ್ಪಶೆಟ್ಟರಿಂದಲೂ, ಬ್ರಹ್ಮಶ್ರೀ ಹೊಳಿಹೊನ್ನೂರ ಪಟ್ಟಾಧ್ಯಕ್ಷರಿಂದಲೂ, ಪಂಡಿತರಾಜ ಶ್ರೀಕಾಶೀನಾಥಶಾಸ್ತ್ರಿಗಳಿಂದಲೂ ಪೂವಲ್ಲಿ ಬೃಹನ್ಮಠಾಧ್ಯಕ್ಷ ತರ್ಕತೀರ್ಥ ಶ್ರೀ ನೀಲಕಂಠಶಿವಾಚಾರ್ಯರಿಂದಲೂ ಪುರಗಿರಿ ಬೃಹನ್ಮಠಾಧ್ಯಕ್ಷ ಶಿವಸಿದ್ಧಾಂತತತ್ತ್ವಜ್ಞ ಶ್ರೀ ಚಿದ್ಘನಶಿವಾಚಾರ್ಯರಿಂದಲೂ, ಬೆಂಗಳೂರು ಪ್ರಸಿದ್ಧ ಪುರೋಹಿತರತ್ನ ಶ್ರೀ ಗುರುಲಿಂಗಶಾಸ್ತ್ರಿಗಳಿಂದಲೂ, ಬೆಂಗಳೂರ ಆಸ್ಥಾನವಿದ್ವಾಂಸರಾದ ಶ್ರೀ ಶಿರಸಿ ಗುರುಶಾಂತಶಾಸ್ತ್ರಿಗಳು ಮತ್ತು ಶ್ರೀ ವಿಶ್ವನಾಥಶಾಸ್ತ್ರಿಗಳಿಂದಲೂ, ಮೈಸೂರು ಬೆಂಗಳೂರು ನಗರದ ಶೆಟ್ಟರು, ದೇಶದಶೆಟ್ಟರು, ಯಜಮಾನರು, ವರ್ತಕರೂ, ಡಾಕ್ಟರರೂ, ವಕೀಲರೂ, ಆಫೀಸರರೂ ಮುಂತಾದ ವೀರಶೈವ ಮಹಾಜನಸಂಘದಿಂದಲೂ ವಿರಾಜಮಾನವಾದ ಲಕ್ಷೋಪಲಕ್ಷ ವೀರಶೈವಮಹಾಜನರಿಂದಲೂ ತಾ|| ೨೨-೧೧-೧೯೨೫ ನೆಯ ದಿವಸ ಸ್ವಾಗತಿಸಲ್ಪಟ್ಟು ಸಿಂಹಪೀಠವನ್ನಲಂಕರಿಸಿದರು.

# ಶ್ರೀರಂಭಾಪುರೀ ಜಗದ್ಗುರು ಪೀಠದ ಪಟ್ಟಾಧಿಕಾರಮಹೋತ್ಸವ

ತಾ|| ೨೨-೧೧-೧೯೨೫ನೇ ಇಸವಿಯ ಪ್ರಾತಃಕಾಲ ೮ ಗಂಟೆ ೪೫ ನಿಮಿಷಕ್ಕೆ ಸಲ್ಲುವ ಧನುರ್ಲಗ್ನ ಶುಭಾಂಶದಲ್ಲಿ ಸ್ವಸ್ತಿವಾಚನ, ಪುಣ್ಯಾಹವಾಚನ ನಾಂದೀಸಮಾರಾಧನೆ ಮಂಟಪ ದೇವತಾಪ್ರತಿಷ್ಠೆ ಪಂಚಕಲಶಾರ್ಚನಾದಿ ಸಕಲ ವೈದಿಕ ಕರ್ಮಪುರಸ್ಸರವಾಗಿ ಸಿದ್ಧಗೊಳಿಸಲ್ಪಟ್ಟ ಮಂಟಪದಲ್ಲಿ ಬೆಂಗಳೂರು ಪುರೋಹಿತರತ್ನ ಶ್ರೀ ಗುರುಲಿಂಗಶಾಸ್ತ್ರಿಗಳು ವೈದಿಕ ಪಂಡಿತಮಂಡಲಿಯೊಡನೆ ವೇದಮಂತ್ರೋಚ್ಚಾರಣಪೂರ್ವಕ ನೂತನ ಜಗದ್ಗುರುಗಳಿಗೆ ಮಂಗಲಸ್ನಾನವಂ ಮಾಡಿಸಿ ಅವರನ್ನು ಸಿಂಹಾಸನಾಧಿಸ್ಥಿತ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾಚಾರ್ಯ ಮಹಾಪಾದಸನ್ನಿಧಿಯಲ್ಲಿ ಕರೆದೊಯ್ದು ಸಾಷ್ಟಾಂಗ ಪ್ರಣಾಮಗಳನ್ನು ಮಾಡಿಸಿದ ಕೂಡಲೇ ಶ್ರೀಜಗದ್ಗುರು ಸಿದ್ಧಲಿಂಗ ಶಿವಾಚಾರ್ಯರು ಅವರನ್ನು ಉಚ್ಚಾಸನದಲ್ಲಿ ಕೂಡ್ರಿಸಿ ಶಾಸ್ತ್ರಪದ್ಧತಿಯ ಮೇರೆಗೆ ಅಭಿಷೇಕ ಮಾಡಿಸಿ ಕಂಥಾ ಕೌಪೀನ ಕಾಷಾಯವಸ್ತ್ರ ಭಸ್ಮ ರುದ್ರಾಕ್ಷಗಳನ್ನು ಕೊಟ್ಟು ಧರ್ಮಾಧಿಕಾರಪ್ರಧಾನವಾದ ದಂಡ ಕಮಂಡಲು ಮುದ್ರಾಧರ್ಮ ಪ್ರದಾನಪೂರ್ವಕ ವೀರಸಿಂಹಾಸನವನ್ನಾರೋಹಣಮಾಡಿಸಿ ರತ್ನಖಚಿತ ಕಿರೀಟಧಾರಣಮಾಡಿ ಶ್ರೀಜಗದ್ಗುರು ಶಿವಾನಂದರಾಜೇಂದ್ರಶಿವಾಚಾರ್ಯರೆಂದು ನಾಮಕರಣ ಮಾಡುತ್ತಿರುವಾಗಲೇ ಲಕ್ಷಾಂತರ ಜನತತಿಯಿಂದ ದಿಗಂತವಿಶ್ರಾಂತವಾದ ವಿಶ್ವತೋವ್ಯಾಪಿ ಜಯಜಯಕಾರಧ್ವನಿಯು ಮಾಡಲ್ಪಟ್ಟಿತು. ವಿಜಯಭೇರಿಗಳು ದಿಙ್ಮಂಡಲವನ್ನು ವ್ಯಾಪಿಸುವಂತೆ ಭೋರ್ಗರೆದವು. ಭಕ್ತರ ಪರಮಾನಂದವು ಸೀಮಾತೀತವಾಯಿತು. ಪ್ರಥಮತಃ ಉಜ್ಜಯಿನೀ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯರು ನೂತನ ಜಗದ್ಗುರುಗಳ ಪರಿಚಯ

ವನ್ನು ಅವರ ಗುಣಾವಲಿಯೊಡನೆ ಸಭಿಕರಿಗೆ ಸೂಚಿಸುತ್ತ ಕುಪ್ಪಗಲ್ಲ ಗುಡದಿನ್ನಿ ಬೃಹನ್ಮಠಾಧ್ಯಕ್ಷ ವೇ॥ ಶ್ರೀ ಸಿದ್ಧೇಶ್ವರಯ್ಯನವರ ಪುತ್ರರಾದ ವ್ಯಾಕರಣತೀರ್ಥ ಪಂಡಿತ ಶ್ರೀ ಸದಾಶಿವಶಾಸ್ತ್ರಿಗಳಿಗೆ ಶ್ರೀಜಗದ್ಗುರು ರೇಣುಕಾಚಾರ್ಯಭಗವತ್ಪಾದರ ಪರಂಪರಾಗತ ವೀರಸಿಂಹಾಸನ ಮಠದ ಪಟ್ಟಾಧಿಕಾರವನ್ನು ಪ್ರದಾನಮಾಡಿರುತ್ತೇವೆ ಎಂದು ಘೋಷಿಸಿದರು.

## ನೂತನ ಜಗದ್ಗುರುಗಳ ಸಂದೇಶ

**ಸೇವಾಧರ್ಮಃ ಪರಮಗಹನೋ ಯೋಗಿನಾಮಪ್ಯಗಮ್ಯಃ।**

ಈ ಪದ್ಯಾಂಶವನ್ನು ಹೇಳಿ ಶ್ರೀಜಗದ್ಗುರು ವಿಶ್ವಾರಾಧ್ಯ ಭಗವತ್ಪಾದರ ಸೇವೆಯಿಂದಲೇ ನಾವು ಈ ಪರಮತಪೋನಿಧಿಗಳಾದ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಅಮೃತಹಸ್ತದಿಂದ ಶ್ರೀಜಗದ್ಗುರು ರೇಣುಕಾಚಾರ್ಯ ಪರಂಪರಾ ಪಟ್ಟಬಂಧನಭೂಷಿತರಾಗಿ ಅಖಿಲ ಭಾರತೀಯ ವೀರಶೈವ ಮಹಾಜನ ಜಗದ್ಗುರುತ್ವದ ಜವಾಬದಾರಿಯನ್ನು ವಹಿಸಿದೆವು ಭುವನಪ್ರಸಿದ್ಧ ಶ್ರೀಜಗದ್ಗುರು ರೇಣುಕಗಣೇಶ್ವರರ ಮಹಾನುಗ್ರಹಬಲದಿಂದಲೇ ಈ ರಂಭಾಪುರೀ ವೀರಸಿಂಹಾಸನೋದ್ಧಾರ ಕಾರ್ಯವು ನಡೆಯಬೇಕಾಗಿದೆ. ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರ ಕೃಪೆಯಿಂದಲೂ ನಿಮ್ಮಂಥ ವೀರಶೈವ ಧರ್ಮಾಭಿಮಾನಿಗಳಿಂದಲೂ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಶಿವಯೋಗೀಶ್ವರರ ಶಿವಾಶೀರ್ವಾದದಿಂದಲೂ ಪೀಠವು ವೈಭವದಿಂದ ಮೆರೆಯುವದೆಂಬ ಭರವಸೆ ನಮಗೆ ಸಂಪೂರ್ಣವಾಗಿರುತ್ತದೆ. ಈ ಪೀಠಾಧಿಕಾರ ಮಹೋತ್ಸವಕ್ಕೆ ತಾವೆಲ್ಲರೂ ಆಗಮಿಸಿರುವದು ಸಂತೋಷದ ಸಂಗತಿಯಾಗಿರುವುದರಿಂದ ಶ್ರೀಜಗದ್ಗುರು ರೇಣುಕ ಭಗವತ್ಪಾದರು ತಮ್ಮೆಲ್ಲರಿಗೆ ಸನ್ಮಂಗಲವನ್ನುಂಟುಮಾಡಲಿ.

ಬಳಿಕ ನೂತನ ಜಗದ್ಗುರುಗಳಿಗೆ ಚತುಃಪೀಠಾಧೀಶ್ವರರ ವತಿಯಿಂದ ಪೀಠದ ಗೌರವಾರ್ಥ ಖಿಲ್ಲತ್ತುಗಳು ಸಮರ್ಪಣವಾದ ಕೂಡಲೆ ಮೇಲ್ಕಂಡ ಸಮಸ್ತ ಭಾರತ ವೀರಶೈವ ಮಹಾಜನರ ಕಾಣಿಕಾ ಸಮರ್ಪಣವಾಗಿ ಶ್ರೀರಂಭಾಪುರೀಶ್ವರ–ವೀರೇಶ್ವರ ಮಹಾ ಸ್ವಾಮಿಯು ಶ್ರೀಕರ್ತೃರುದ್ರಮುನೀಶ್ವರ–ಮುಕ್ತಿಮುನೀಶ್ವರ ಮಹಾ ಸ್ವಾಮಿಯ ಸಂದರ್ಶನ ಮಹಾಮಂಗಲಾರತಿಯನ್ನು ಮಾಡಿಕೊಂಡು ನೂತನ ಜಗದ್ಗುರುಗಳು ಶಿವಪೂಜಾಮಂದಿರದಲ್ಲಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರಿಂದ ಉಪದೇಶವನ್ನು ಪಡೆದರು.

## ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಉಪದೇಶ ಸಾರ

ಋಗಾದಿ ವೇದಗಳಲ್ಲಿಯೂ ಕಾಮಿಕಾದಿ ಆಗಮಗಳಲ್ಲಿಯೂ ಶಿವಲಿಂಗಾರ್ಚನವು ಶೃತವಾಗಿರುತ್ತದೆ.

**ಅಯಂ ಮೇ ಹಸ್ತೋಭಗವಾನಯಂ ಮೇ ಭಗವತ್ತರಃ ।**
**ಅಯಂ ಮೇ ವಿಶ್ವಭೇಷಜೋಯಂ ಶಿವಾಭಿಮರ್ಶನಃ ॥**

(ಋಕ್‌ಸಂ. ಅ, ಲ. ಅ. ೧ ವ. ೨೫)

ಕರಕಮಲದಲ್ಲಿ ವಿರಾಜಿಸುವ ಶಿವನ ಪೂಜಾಪದ್ಧತಿಯು ಋಗ್ವೇದದ ಈ ಮಂತ್ರದಲ್ಲಿ ಸ್ಪಷ್ಟವಾಗಿರುವದರಿಂದ ಶಿವಲಿಂಗಾರ್ಚನವು ಶುದ್ಧ ವೈದಿಕಧರ್ಮವಾಗಿದೆ.

ನಿಧನಪತಯೇ ನಮಃ ನಿಧನಪತಾಂತಿಕಾಯ ನಮಃ ।
ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ ।
ಹಿರಣ್ಯಾಯ ನಮಃ ಹಿರಣ್ಯಲಿಂಗಾಯ ನಮಃ ।
ಸುವರ್ಣಾಯ ನಮಃ ಸುವರ್ಣಲಿಂಗಾಯ ನಮಃ ।

ದಿವ್ಯಾಯ ನಮಃ ದಿವ್ಯಲಿಂಗಾಯ ನಮಃ ।
ಭವಾಯ ನಮಃ ಭವಲಿಂಗಾಯ ನಮಃ ।
ಶರ್ವಾಯ ನಮಃ ಶರ್ವಲಿಂಗಾಯ ನಮಃ ।
ಶಿವಾಯ ನಮಃ ಶಿವಲಿಂಗಾಯ ನಮಃ ।
ಜ್ವಲಾಯ ನಮಃ ಜ್ವಲಲಿಂಗಾಯ ನಮಃ ।
ಆತ್ಮಾಯ ನಮಃ ಆತ್ಮಲಿಂಗಾಯ ನಮಃ ।
ಪರಮಾಯ ನಮಃ ಪರಮಲಿಂಗಾಯ ನಮಃ ।
ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ।
ಪಾಣಿಮಂತ್ರಂ ಪವಿತ್ರಂ ॥

(ಯಜುಃ ಸಂ. ತೈತ್ತರೀಯಾರಣ್ಯಕ-ಪ್ರಪಾಠಕ ೧೦ ಅನುವಾಕ ೧೦)

ನಿಷ್ಕಲಘನಲಿಂಗ, ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ಇಷ್ಟಲಿಂಗ, ಪ್ರಾಣಲಿಂಗ ಮತ್ತು ಭಾವಲಿಂಗ ಎಂಬ ದಶವಿಧ ಲಿಂಗಗಳ ಪ್ರತಿಪಾದನೆಯು ಈ ಯಜುರ್ವೇದ ಮಂತ್ರದಲ್ಲಿ ಶೃತವಾಗಿರುತ್ತದೆ. ದೀಕ್ಷಾಕಾಲದಲ್ಲಿ ಶಿವಾಚಾರ್ಯನು ಶಿಷ್ಯನ ಪಾಣಿಪದ್ಮದಲ್ಲಿ ಶಿವಲಿಂಗವನ್ನಿಟ್ಟು ಲಿಂಗರಹಸ್ಯವನ್ನು ಬೋಧಿಸುವುದರಿಂದಲೇ ಈ ಮಂತ್ರಕ್ಕೆ ಪಾಣಿಮಂತ್ರವೆಂದು ಹೇಳುತ್ತಾರೆ.

ಅಥಾತೋ ಬ್ರಹ್ಮಜಿಜ್ಞಾಸಾ

(ಅ. ೧ ಪಾ. ೧ ಅಧಿ. ೧ ಸೂ. ೧೧)

ಆಕಾಶಸ್ತಲ್ಲಿಂಗಾತ್ (ಅ. ೧ ಪಾ. ೧ ಅಧಿ. ೮ ಸೂ. ೨೩)

ಅತ ಏವ ಪ್ರಾಣಃ (ಅ. ೧ ಪಾ. ೧ ಅಧಿ. ೮ ಸೂ. ೨೪)

ಜ್ಯೋತಿಶ್ಚರಣಾಭಿಧಾನಾತ್

(ಅ. ೧ ಪಾ. ೧ ಅಧಿ. ೯ ಸೂ. ೨೫)

ಛಂದೋಭಿಧಾನಾನ್ನೇತಿಚೇನ್ನ ತಥಾ ಚೇತೋಽರ್ಪಣ
ನಿಗದಾತ್ತಥಾಹಿ ದರ್ಶನಂ।
(ಅ. ೧ ಪಾ. ೧ ಅಧಿ. ೯ ಸೂ. ೨೬)

ಭೂತಾದಿವ್ಯಪದೇಶೋಪಪತ್ತೇಶ್ಚೈವಂ।
(ಅ. ೧ ಪಾ. ೧ ಅಧಿ. ೯ ಸೂ. ೨೭)

ಜೀವಮುಖ್ಯ ಪ್ರಾಣಲಿಂಗಾನ್ನೇತಿಚೇನ್ನೋಪಾಸಾ
ತ್ರೈವಿಧ್ಯಾದಾಶ್ರಿತತ್ವಾದಿಹತದ್ಯೋಗಾತ್।
(ಅ. ೧ ಪಾ. ೧ ಅಧಿ. ೧೧ ಸೂ. ೩೨)

ಇತ್ಯಾದಿ ಬ್ರಹ್ಮಸೂತ್ರಗಳಲ್ಲಿ ಪೂರ್ವೋಕ್ತಪಾಣಿಮಂತ್ರೋಕ್ತ ದಶವಿಧಲಿಂಗಗಳ ಉಪಾಸನೆಯು ಸೂತ್ರಿತವಾಗಿರುತ್ತದೆ. ಈ ಅರ್ಥವು ಶ್ರೀ ನೀಲಕಂಠಭಾಷ್ಯಕಾರಿಕೆಯಾದ ಕ್ರಿಯಾಸಾರ, ಶ್ರೀಕರಭಾಷ್ಯ ಗಳಲ್ಲಿ ವಿವೃತವಾಗಿದೆ. ಶ್ರೀ ರೇಣುಕಾದಿ ಪಂಚಾಚಾರ್ಯರು ಈ ಋಗಾದಿ ವೇದಗಳ ವೃತ್ತಿಗಳನ್ನು ಬರೆದಿರುತ್ತಾರೆ. ಸಿದ್ಧಾಂತಶಿಖಾ ಮಣಿಯು ಈ ಪೂರ್ವೋಕ್ತ ಶಿವಲಿಂಗೋಪಾಸನೆಯನ್ನೇ ಬೋಧಿಸು ತ್ತದೆ. ಇತ್ಯಾದಿ ಋಗಾದಿ ಪ್ರಮಾಣಗಳಿಂದಲೂ ಶಿವಾಗಮಗಳಿಂದಲೂ ಸಿದ್ಧವಾದ ಶಿವಾರ್ಚನೆಯೇ ಮುಖ್ಯವಾದ ಶಿವಯೋಗವೆಂದೂ ಅದ ರಿಂದಲೇ ಮೋಕ್ಷವೆಂದೂ ಶಿವಧರ್ಮದ ಸಾರವಾಗಿರುತ್ತದೆ. ಸ್ಕಾಂದಾದಿ ಪುರಾಣಗಳಲ್ಲಿಯೂ ಸಹ ಶಿವಲಿಂಗಾರ್ಚನದ ವಿಸ್ತಾರವಿದೆ. ಶಿವಭಕ್ತಿ ಯಿಂದಲೇ ಸರ್ವಸಿದ್ಧಿಲಾಭವಿರುತ್ತದೆ. ಇತ್ಯಾದಿ ಶಿವಸಿದ್ಧಾಂತ ಕಥನಾನಂತರ ಮಹಾಮಂತ್ರೋಪದೇಶಪೂರ್ವಕ ಶಿವಾರ್ಚನ ಕ್ರಮವನ್ನೂ ಶಿವಾರ್ಪಣವಿಧಿಯನ್ನೂ ಬೋಧಿಸಿದರು.

ತಾ|| ೨೩-೧೧-೧೯೨೫ ರಲ್ಲಿ ಬಾಳೇಹೊನ್ನೂರ ಪುರವೀಥಿ ಗಳಲ್ಲಿ ಮಹಾಪೀಠದ ಪೂರ್ವಪದ್ಧತಿಯಂತೆ ನೂತನ ಜಗದ್ಗುರುಗಳ

ಪಲ್ಲಕ್ಕಿಮಹೋತ್ಸವವು ಮಹಾಸಂಸ್ಥಾನದ ಸಮಸ್ತ ರಾಜಬಿರುದಾವಲಿಯೊಡನೆ ನಡೆಯಿತು. ನಾವು ಈ ಪಟ್ಟಾಧಿಕಾರ ಮಹೋತ್ಸವವನ್ನು ಪ್ರತ್ಯಕ್ಷ ನೋಡಿದ ಅನುಭವದಿಂದ ಸಾದರಪೂರ್ವಕವಾಗಿ ವರ್ಣಿಸಿರುವೆವು.

ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಭಗವತ್ಪಾದರು ಶ್ರೀರಂಭಾಪುರೀ ನೂತನ ಜಗದ್ಗುರುಗಳಿಗೆ ಪೀಠದ ಸರ್ವತಂತ್ರಸ್ವತಂತ್ರಾಧಿಪತ್ಯವನ್ನು ನಡೆಸುವ ಸಕಲ ವಿಚಾರಗಳನ್ನು ತಿಳಿಸಿ ಅಲ್ಲಿಂದ ಈ ವಿಜಯಯಾತ್ರೆಯನ್ನು ಪೂರೈಸಿಕೊಂಡು ತೋರಣಮಾಂವು ಶ್ರೀ ಬಸವೇಶ್ವರ ಮಂದಿರದಲ್ಲಿ ಏಕಾಂತತಃ ಶಿವಾರ್ಚನಮಾಡಿ ಅಲ್ಲಿಂದ ಉಜ್ಜಯಿನಿ ಮಠದ ಕಡೆಗೆ ಪ್ರಯಾಣ ಬೆಳೆಯಿಸಿದರು. ಆಗ ರಂಭಾಪುರೀ ಪೀಠದ ಮಹಾದ್ವಾರದಂತಿದ್ದ ಚಿಕ್ಕಮಂಗಳೂರ ನಗರದ ಕಾಫಿಪ್ಲಾಂಟರರೇ ಮೊದಲಾದ ವೀರಶೈವ ಮಹಾಜನರ ಪ್ರಾರ್ಥನಾನುಸಾರವಾಗಿ ೨೧-೨-೧೯೨೬ ನೆಯ ದಿವಸ ಪೂರ್ವೋಕ್ತ ಮೈಸೂರ ಸರ್ಕಾರದ ರಹದಾರಿಯ ಮೇರೆಗೆ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರು ಸ್ವರ್ಣರಂಜಿತ ರಜತಪಲ್ಲಕ್ಕಿಯ ಮಹೋತ್ಸವದೊಡನೆ ಪುರಪ್ರವೇಶಮಾಡಿ ಸಮಸ್ತ ವೀರಶೈವರಿಗೆ ಸಂದರ್ಶನಾಶೀರ್ವಾದ ಪ್ರದಾನಮಾಡಿದರು.



## ಶ್ರೀಜಗದ್ಗುರುಗಳವರ ಶಿವಯೋಗಾನುಷ್ಠಾನ ಸಮಾರಂಭ

ಅನಂತಪುರ ಜಿಲ್ಲಾ ಪಾಲ್ತೂರ ಪಟ್ಟಣದಲ್ಲಿ ತಾ॥ ೨೦-೮-೧೯೨೦ ನೆಯ ದಿವಸ ಶ್ರಾವಣಮಾಸದ ಶಿವಪೂಜಾ ಮಹೋತ್ಸವದಲ್ಲಿ ವಿಶೇಷ ವೈಭವಾನಂದಲೋಲರಾದ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ

ಮಹಾಶಿವಯೋಗೀಶ್ವರರು ಮಹಾಗಣಾರಾಧನೆ ಮಾಡಿಸಿ ಒಬ್ಬೊಬ್ಬ ಗಣಂಗಳಿಗೆ ಒಂದೊಂದು ರೂಪಾಯಿಯಂತೆ ಸ್ವಹಸ್ತದಿಂದಲೇ ದಾನಕೊಟ್ಟು ಸಂತೃಪ್ತಿಪಡಿಸಿದರು. ಆ ದಿವಸ ಪ್ರಾತಃಕಾಲ ೯ ಘಂಟೆಯಿಂದ ಸಾಯಂಕಾಲ ೮ ಘಂಟೆಯವರೆಗೂ ಅವಿಚ್ಛಿನ್ನ ಶಿವ ಗಣ ಸಂತೃಪ್ತಿಸಮಾರಂಭವು ನಡೆಯಿತು. ಈ ಗಣಾರಾಧನೆಯಲ್ಲಿ ಸ್ವತಃ ಸನ್ನಿಧಿಯವರು ವಿರಾಡ್ರೂಪದಿಂದ ವ್ಯವಸ್ಥಾಪಕರಾಗಿದ್ದರು. ಆ ದಿವಸ ಗಣಂಗಳಿಗೆ ಸಮರ್ಪಣವಾದ ರೂಪಾಯಿಗಳ ಸಂಖ್ಯೆಯು ಐದುಸಾವಿರಕ್ಕೆ ಮುಟ್ಟಿತು.

ತಾ|| ೪-೮-೧೯೨೧ ನೆಯ ಇಸವಿಯಲ್ಲಿ ಶ್ರೀಜಗದ್ಗುರು ಸಿದ್ಧ ಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಅಕಸ್ಮಾತ್ ಬಳ್ಳಾರಿ ಪುರಕ್ಕೆ ವಿಜಯಂಗೈಸಿದರು. ಆ ಕಾಲಕ್ಕೆ ಆ ಪ್ರಾಂತದಲ್ಲಿ ಅನಾವೃಷ್ಟಿಯಿಂದ ಪೀಡಿತರಾದ ಪ್ರಜೆಗಳ ಪ್ರಾರ್ಥನೆಯ ಪ್ರಕಾರ ಶ್ರೀಗಳು ಪರಮ ಶಿವಾರ್ಚನಾನುಷ್ಠಾನಪೂರ್ವಕ ನಡೆಸಿದ ಮಹಾಗಣಾರಾಧನೆಯಿಂದ ಸುವೃಷ್ಟಿಯಾಗಿ ಸರ್ವರೂ ಸಂತೋಷಪಟ್ಟರು.

ಹೂವಿನಹಡಗಲಿ ತಾಲೂಕಿನ ಸೋಗಿ ಗ್ರಾಮದ ಸಮೀಪ ಕ್ಕಿರುವ ಅತ್ಯುನ್ನತಶಿಖರದಲ್ಲಿ ಪುರಾತನವಾದ ಶ್ರೀಮಲ್ಲಿಕಾರ್ಜುನ ಮಹಾದೇವಸ್ಥಾನವಿದೆ. ಈ ಸ್ಥಾನವು ನಾನಾವಿಧ ವೃಕ್ಷವೃಂದದಿಂದಲೂ ಪಕ್ಷಿಗಣದಿಂದಲೂ ಶುದ್ಧ ಶೀತವಾಯುವಿನಿಂದಲೂ ಯಾತ್ರಿಕರ ಮನ ಸಿಗೆ ಪರಮಾನಂದವನ್ನುಂಟುಮಾಡುತ್ತಲಿದೆ. ಈ ಬೆಟ್ಟದ ತುದಿಯಲ್ಲಿ ರುವ ಮುದಿಮಲ್ಲೇಶ್ವರ ದೇವಾಲಯದ ಬಳಿಗೆ ಪಾತಾಳಗಂಗೆಯು ಶೀತಲೋದಕಪೂರಿತೆಯಾಗಿ ಸರ್ವದಾ ವಿರಾಜಿಸುತ್ತಲಿರುವಳು. ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ತಾರೀಖು ೧-೩-೧೯೨೩ ನೆಯ ದಿವಸ ಶ್ರೀ ಗಿರಿಮಲ್ಲೇಶ್ವರನ ಸನ್ನಿಧಿಯಲ್ಲಿ

ನಿವಾಸಮಾಡಿ ಶಿವಾರ್ಚನಮಹಾತಪೋನುಷ್ಠಾನವನ್ನು ಮಾಡುತ್ತ ಶಿವಾನಂದಭರಿತರಾಗಿದ್ದರು. ಮುಂದೆ ತಾ|| ೨೯-೮-೧೯೨೩ ನೆಯ ಇಸವಿ ದಿವಸ ಹೊಳಗುಂದಿಯ ಸಮೀಪದ ಉನ್ನತ ಸ್ಥಾನದಲ್ಲಿರುವ ಶ್ರೀಸಿದ್ಧೇಶ್ವರ ದೇವಾಲಯದಲ್ಲಿ ನಿವಾಸಮಾಡಿ ಶಿವಾರ್ಚನೆಗೈದು ಜಂಗಮರಿಗೆ ಮೃಷ್ಟಾನ್ನಭೋಜನ ಫಲತಾಂಬೂಲ ದಕ್ಷಿಣಾದಿಗಳಿಂದ ತೃಪ್ತಿಪಡಿಸಿದರು.

ಧಾರವಾಡ ಡಿ|| ಗದಗ ತಾಲೂಕ ಹಮ್ಮಿಗಿ ಸಿಂಗಟಾಲೂರ ನವುಲಿ ಗ್ರಾಮಗಳಿಗೆ ಅತಿಸಮೀಪವಾದ ತುಂಗಭದ್ರಾತೀರದ ಸಘನವನ ಮಧ್ಯ ವಿರಾಜಿತ ವಟ, ಅಶ್ವತ್ಥ, ಚೂತ, ಚಂಪಕ, ಚಮೇಲಿ, ನಿಂಬ, ಶಮಿ, ಬಿಲ್ವ, ಚಂದನಾದಿ ಪಾದಪಶ್ರೇಣಿಯಿಂದಲೂ ಶುಕ, ಪಿಕ, ಕಾಕ, ಮಯೂರ, ಕಪೋತ, ಚಟಕಾದಿ ಪಕ್ಷಿಗಣದಿಂದಲೂ; ಸಿಂಹ, ವ್ಯಾಘ್ರಾದಿ ಮೃಗಸಮೂಹದಿಂದಲೂ ಪ್ರೋನ್ನತ ಶಿಖರಾನ್ವಿತ ಪರ್ವತದ ಅಗ್ರಭಾಗದಲ್ಲಿ ಶ್ರೀ ದಕ್ಷಾಧ್ವರ ವಿಧ್ವಂಸಕ ವೀರಭದ್ರ ಮಹಾಗಣೇಶ್ವರ ಮಂದಿರವಿದೆ. ಈ ವೀರೇಶ್ವರ ಮಹಾಯಾತ್ರೆಗೋಸ್ಕರ ಗದಗ ಕೊಪ್ಪಳ ಹೂವಿನಹಡಗಲಿ ಹಿರೇಹಡಗಲಿ ಹಂಪಸಾಗರ ಹರಪನಹಳ್ಳಿ ಮುಂತಾದ ನಗರಗಳ ನಾನಾಮಾರ್ಗಗಳಿಂದಲೂ ಯಾತ್ರಿಕರು ಬಂದು ಶ್ರೀ " " ಮಹಾಸ್ವಾಮಿ ವೀರೇಶನ ದರ್ಶನಾಶೀರ್ವಾದದಿಂದ ಧನ್ಯರಾಗುತ್ತಿದ್ದಾರೆ. ಪ್ರತಿವರ್ಷ ಚೈತ್ರ ಶುಕ್ಲ ೫ ಮಿತಿಯಲ್ಲಿ ಶ್ರೀ " " ಮಹಾಸ್ವಾಮಿಯ ರಥೋತ್ಸವವು ಅತಿ ವೈಭವದಿಂದ ನಡೆಯುತ್ತದೆ. ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಶಿವಯೋಗೀಶ್ವರರು ೧೦-೧೧-೧೯೨೩ ನೆಯ ಇಸವಿಯಲ್ಲಿ ಈ ವೀರಭದ್ರಸ್ವಾಮಿಯ ಪವಿತ್ರಾಶ್ರಮಕ್ಕೆ ವಿಜಯಂಗೈಸಿ ಪರಮಾನಂದಪೂರ್ವಕ ಶಿವಾರ್ಚನರೂಪ ಮಹಾತಪೋನುಷ್ಠಾನವಂಗೈದು ಆ ದೇವಸ್ಥಾನದ ಕಮಿಟಿಯ ವ್ಹಿಜಿಟರ್ಸ ಬುಕ್ಕಿನಲ್ಲಿ ಈ ಆಶ್ರಮವನ್ನು ಪ್ರಶಂಸಿರುತ್ತಾರೆ.

[ಅದರ ನಕಲು]

[ಮೊಹರು]

ಶ್ರೀಮದ್ವೀರಶೈವ ಮಹಾಮತಸ್ಥಾಪನಾಚಾರ್ಯ ಶ್ರೀಜಗದಾಚಾರ್ಯ ಶ್ರೀ ೧೦೮ ದಾರುಕಾಚಾರ್ಯ ಸಮಧಿಷ್ಠಿತ ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ ಜಗದ್ಗುರು ಚರಪಟ್ಟಾಧ್ಯಕ್ಷ ಶ್ರೀಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿನಾಂ ಸನ್ನಿಧಿಯಿಂದ-

ಶ್ರೀ ಸಿಂಗಟಾಲೂರ ಶ್ರೀ ವೀರಭದ್ರ ದೇವಾಲಯದ ಕಾರ್ಯನಿರ್ವಾಹಕಮಂಡಲಿಯಾದ ವೀರಶೈವಮಂಡಲಿಗೆ—(ಅಂದರೆ ಹಮ್ಮಿಗಿ, ಸಿಂಗಟಾಲೂರು ನವಲಿ ಈ ಮೂರು ಗ್ರಾಮಗಳ ಮೆಂಬರರು ಮತ್ತು ಹಡಗಲಿ ಪ್ರೆಸಿಡೆಂಟರು ಇವರಿಗೆ) ಸಕಲಾಭೀಷ್ಟಸಿದ್ಧಿರಸ್ತು ಇತ್ಯಾಶೀರ್ವಚನವೇನೆಂದರೆ—

---

ಶ್ರೀ ವೀರಭದ್ರೋ ವಿಜಯತೇತರಾಂ

ಯತ್ರಸನ್ನಿಹಿತಾತುಂಗ । ಭದ್ರಾ ಭದ್ರೇವ ನಿರ್ಮಲಾ ।
ಮೋದತೇತತ್ರವೀರೇಶೋ । ಕಪ್ಪತ್ನಾಮನಿಪರ್ವತೇ ॥೧॥

ಇಂತಹ ಶ್ರೀ ವೀರಭದ್ರೇಶ್ವರನ ಈ ಸ್ಥಾನದಲ್ಲಿ ಧರ್ಮಕಾರ್ಯಗಳ ವ್ಯವಸ್ಥೆಗೊಳಿಸುವದಕ್ಕೆ ಯೋಗ್ಯವಿರುವದು. ಮಹಾಸಂಸ್ಥಾನದ ಖುದ್ದು ಸವಾರಿಯು ದಯಮಾಡಿಸಿ ಪರಾಮರ್ಶಿಸಿ ಅಪ್ಪಣೆ ಕೊಡಿಸಬೇಕೆಂದು ಈ ದೇವಸ್ಥಾನದ ಕಾರ್ಯಸಂಪಾದಕ ಮಂಡಲಿಯವರ ಪ್ರಾರ್ಥನೆಯನ್ನು ಅಂಗೀಕರಿಸಿ ಇಲ್ಲಿಗೆ ಸವಾರಿಯು ಚಿತ್ತೈಸಿ ವಿಮರ್ಶಿಸಿದ್ದಾಯಿತು.

ಆದರೆ ವೀರಭದ್ರ ದೇವಾಲಯದ ಈ ಸ್ಥಾನವು ಬಹು ರಮ್ಯವಾಗಿಯೂ ಪವಿತ್ರ ಕ್ಷೇತ್ರವಾಗಿಯೂ ಕಂಡುಬಂದಿರುವದರಿಂದ ಈ ಕಾರ್ಯನಿರ್ವಾಹಕ ಮಂಡಲಿಯ ಅಭಿಪ್ರಾಯದಂತೆ ಶಿವಯೋಗಿಗಳ ವಾಸಸ್ಥಾನಕ್ಕೆ ಯೋಗ್ಯವೆಂದೆನಿಸಿಕೊಂಡ ಈ ವೀರಭದ್ರೇಶ್ವರ ಸ್ಥಾನದಲ್ಲಿ ಶಿವಯೋಗ ನಿಷ್ಣಾತರಾದ ಶಿವಶಾಸ್ತ್ರಪಾರಂಗತರಾದ ಯೋಗ್ಯರಾದೊಬ್ಬ ಪಟ್ಟಾಧಿ ॥ ॥ ಕಾರಿಗಳನ್ನಾಗಲಿ ಅಥವಾ ಒಬ್ಬ ಚರಾಧಿಕಾರಿಗಳನ್ನಾಗಲಿ ಈ ಸ್ಥಾನದಲ್ಲಿದ್ದು ಶಿವಯೋಗಸಾಧಕರನ್ನು ತಯಾರಿಸಿ ತದ್ದ್ವಾರಾ ಸಾಕ್ಷಾತ್ ಶಿವಭಕ್ತರನ್ನು (ಬಂದ ಭಕ್ತಮಾಹೇಶ್ವರರನ್ನು ಧರ್ಮಬೋಧೆಯಿಂದ) ಉದ್ಧಾರಗೊಳಿಸಲಿಕ್ಕೆ ಮಹಾಸಂಸ್ಥಾನದಿಂದ ಕಳುಹಿಸೋಣವಾಗುತ್ತದೆ. ಇತಿ ಶಿವಂ.

ತಾ॥ ೧೧-೧೧-೧೯೨೩ ಮುಕ್ಕಾಂ ಸಿಂಗಟಾಲೂರು ದೇವಾಲಯ



## ವಿದ್ಯಾದಾನ

ಶ್ರೀಜಗದ್ಗುರು ಸಿದ್ಧಲಿಂಗಭಗವತ್ಪಾದರು ಸ್ವತಃ ವಿದ್ಯಾರ್ಥಿಗಳೂ ವಿದ್ವಾಂಸರೂ ಆದಕಾರಣದಿಂದಲೇ ವಿದ್ಯಾಪ್ರೇಮಿಗಳಾಗಿದ್ದರು. ಶ್ರೀಪೀಠಾರೋಹಣ ಕಾಲದಿಂದಲೂ ವಿದ್ಯಾರ್ಥಿಗಳಿಗೂ ವಿದ್ವಾಂಸರಿಗೂ ಅವಿಚ್ಛಿನ್ನವಾಗಿ ಆಶ್ರಯಕೊಡುತ್ತಿದ್ದರು. ಇವರು ಸ್ಥಾಪಿಸಿದ **ಶ್ರೀ ದಾರುಕಾಚಾರ್ಯ ಪಾಠಶಾಲೆಯಲ್ಲಿ** ಪ್ರಾಧ್ಯಾಪಕರಾದ ಉಮಚಗಿ ಪಂಡಿತ ಶ್ರೀ ಶಂಕರಶಾಸ್ತ್ರಿಗಳು ಶ್ರೀಜಗದ್ಗುರು ಮಹಾಶಿವಯೋಗಿ ಸಿದ್ಧಲಿಂಗಭಗವತ್ಪಾದರ ಕೃಪಾವಿಶೇಷದಿಂದ ಆಸ್ಥಾನ ವಿದ್ವಾಂಸರಾಗಿ ಈಶ-ಕೇನ-ಕಠ-ಮುಂಡಕ-ಸಿದ್ಧಾಂತಶಿಖೆ ಮತ್ತು ಬ್ರಹ್ಮಸೂತ್ರಗಳ ಮೇಲೆ ಲಿಂಗಾಂಗಸಾಮರಸ್ಯಬೋಧಿನಿಯಾದ ಶಾಂಕರೀವೃತ್ತಿಯನ್ನೂ ಮತ್ತು ಬ್ರಹ್ಮಾದ್ವೈತ-ಶಿವಾದ್ವೈತ-ವಾದ

ಕಾಂಡವುಳ್ಳ ಸಿದ್ಧಾಂತಸುಧಾಕರವೇ ಮೊದಲಾದ ಗ್ರಂಥಗಳನ್ನೂ ವಿರಚಿಸಿ ಪ್ರಕಾಶ ಮಾಡಿದರು. ಶ್ರೀಜಗದ್ಗುರುಗಳು ಈ ಮಹಾಪಾಠಶಾಲೆಯ ಸಲುವಾಗಿ ಮೂಲನಿಧಿಯನ್ನು ಸಂಗ್ರಹಿಸಿ ಜ್ಞಾನಗುರು ವಿದ್ಯಾಪೀಠ ಎಂಬ ಹೆಸರಿನಿಂದ ಚಿರಸ್ಥಾಯಿ ಮಾಡಿದರು. ಇವರ ತರುವಾಯ ಈಗಿನ ಜಗದ್ಗುರು ಶ್ರೀ ಸಿದ್ಧೇಶ್ವರರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸ್ವಾಮಿಗಳು ಈ ಜ್ಞಾನಗುರು ವಿದ್ಯಾಪೀಠವನ್ನು ರಜಿಸ್ಟರ ಮಾಡಿಸಿ ದ್ವಿಗುಣಿತ ಮೂಲನಿಧಿಯೊಡನೆ ಸುರಕ್ಷಿತವಾಗಿರಿಸಿರುತ್ತಾರೆ.

ತಾ॥ ೧೬-೧೦-೧೯೧೬ ನೆ ಇಸವಿಯಲ್ಲಿ ಶ್ರೀ ಉಜ್ಜಯಿನೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಬಳ್ಳಾರಿ ನಗರದಲ್ಲಿ ಸಮಸ್ತ ವೀರಶೈವರ ವಿದ್ಯಾಭಿವೃದ್ಧಿಗೋಸ್ಕರ ಮದ್ರಾಸ ವೀರಶೈವ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ ಐದು ಸಾವಿರ ರೂಪಾಯಿ ಮೂಲಧನವನ್ನಾಗಿ ದಾನಮಾಡಿ ಚಿರಸ್ಥಾಯಿ ಮಾಡಿದ್ದರಿಂದ ಈ ಸಂಘವು ಈಗ ವಿಶ್ವತೋವಿಖ್ಯಾತವಾಗಿ ವಿದ್ಯಾದಾನ ಮಾಡುತ್ತಲಿದೆ. ಮತ್ತು ಬಳ್ಳಾರಿಯಲ್ಲಿ ನಡೆದ ಐದನೆಯ ವೀರಶೈವ ಮಹಾಸಭೆಯ ರಿಪೋರ್ಟಿನ ೨೭೦-೨೭೧ ನೆಯ ಪುಟಗಳಲ್ಲಿ ಮೇಲ್ಕಂಡ ಸಂಘಸ್ಥಾಪನಾ ವಿಷಯವು ಉಲ್ಲಿಖಿತವಾಗಿದೆ. ೧೯೪೨ ನೆ ಇಸವಿಯಲ್ಲಿ ನಡೆದ ಮೇಲ್ಕಂಡ ಸಂಘದ ರಜತಮಹೋತ್ಸವದಲ್ಲಿ 'ಬೆಳ್ಳಿಹಬ್ಬದ ಬೆಳದಿಂಗಳು' ಎಂಬ ಪುಸ್ತಕವೂ ಸಹ ಮುದ್ರಿತವಾಗಿದೆ. ಆ ಪುಸ್ತಕದ ೪ ನೆ ೩೬ ನೆ ಪುಟಗಳಲ್ಲಿ ಶ್ರೀಜಗದ್ಗುರು ಸಿದ್ಧಲಿಂಗರಾಜದೇಶಿಕೇಂದ್ರ ಭಗವತ್ಪಾದರ ಸಚಿತ್ರ ವೃತ್ತಾಂತವು ನಾನಾರೂಪದಲ್ಲಿ ವಂದನಾರ್ಪಣ ದ್ವಾರಾ ಪ್ರಶಂಸಿತವಾಗಿದೆ. ಈ ಸಂಘದ ಪ್ರತಿವರ್ಷದ ರಿಪೋರ್ಟಿನ ಪ್ರಥಮಪತ್ರದಲ್ಲಿ ಅದ್ಯಾಪಿ "ಶ್ರೀಜಗದ್ಗುರು ಸಿದ್ಧಲಿಂಗಃ ಪ್ರಸೀದತು" ಎಂಬ ಪ್ರಸನ್ನಮುದ್ರೆಯು ಮುದ್ರಿತವಾಗುತ್ತಲೇ ನಡೆದಿದೆ.

ಸೊಲ್ಲಾಪುರ ಪಟ್ಟಣವು ವೀರಶೈವಜನಾಂಗದ ತೌರುಮನೆಯಂ ತಿರುವುದು. ಇಲ್ಲಿರುವಷ್ಟು ವೀರಶೈವ ಜನಸಂಖ್ಯೆಯು ಇನ್ನಾವ ಪಟ್ಟಣದಲ್ಲಿಯೂ ಇರುವುದಿಲ್ಲ. ಈ ಪುಣ್ಯಪಟ್ಟಣದಲ್ಲಿ ಜನ್ಮವೆತ್ತ ಶ್ರೀಮಂತ ವಾರದ ಮಲ್ಲಪ್ಪ ಮಹೋದಯರು ತಮ್ಮ ಕಾಲದಲ್ಲಿ ಗುರುವರ್ಗದ ವಟುಗಳ ಸುಧಾರಣೆಗಾಗಿ ಒಂದು ಸಂಸ್ಕೃತವಿದ್ಯಾಲಯು ವನ್ನು ಸ್ಥಾಪಿಸಿದ್ದರು. ಈ ಮಹೋದಯರ ಕಾಲದಲ್ಲಿ ಈ ವಿದ್ಯಾ ಲಯದ ಕಾರ್ಯಕ್ರಮಗಳು ಅತ್ಯುತ್ತಮವಾಗಿ ಸಾಗುತ್ತಿದ್ದವು. ಪ್ರತಿದಿವಸವೂ ನೂರಾರು ಜನ ಮಾಹೇಶ್ವರ ವಟುಗಳು ಈ ಧರ್ಮಾ ತ್ಮರ ಪೋಷಣೆಯಲ್ಲಿದ್ದು ಸಂಸ್ಕೃತಶಿಕ್ಷಣವನ್ನು ಪಡೆಯುತ್ತಿದ್ದರು. ಅನೇಕ ಜನ ಪಂಡಿತರು ಈ ಪುಣ್ಯಮೂರ್ತಿಗಳ ಆಶ್ರಯದಲ್ಲಿದ್ದು ಪೋಷಣೆಯನ್ನು ಹೊಂದುತ್ತಿದ್ದರು. ಇಂಥ ತೇಜೋಮಯ ಮೂರ್ತಿಯು ಶಿವಾಧೀನವಾಗಲು ಅಂದಿನಿಂದ ಧರ್ಮಗ್ರಂಥಮುದ್ರಣ ಶೋಧನಾದ್ಯನೇಕ ಕಾರ್ಯಗಳು ನಿಂತುಹೋದುದನ್ನು ಕೇಳಿದ ಶ್ರೀಜಗದ್ಗುರು ಸಿದ್ಧಲಿಂಗಶಿವಯೋಗಿಗಳು ತಮ್ಮ ಧರ್ಮಬೋಧದ ಸಂಚಾರ ಕಾಲದಲ್ಲಿ ಸೊಲ್ಲಾಪುರಕ್ಕೆ ಆಗಮಿಸಿದಾಗ ಈ ಸಂಸ್ಕೃತ ವಿದ್ಯಾಲಯಕ್ಕೆ ೧೯೩೩ ನೇ ಇಸ್ವಿ ಆಗಸ್ಟ್ ೩೧ ನೆಯ ತಾರೀಖಿನ ದಿವಸ ಬಿಜಯಂಗೈಸಿ ತಮ್ಮ ಸಂಸ್ಥಾನ ಪಂಡಿತರಿಂದ ವಿದ್ಯಾರ್ಥಿಗಳ ಪರೀಕ್ಷೆಯನ್ನು ಮಾಡಿಸಿ ಸರ್ವ ವಿದ್ಯಾರ್ಥಿಗಳಿಗೂ ಪಾರಿತೋಷಕವನು ಅನುಗ್ರಹಿಸಿದ್ದುದಲ್ಲದೆ, ಈ ಮಹಾಪಾಠಶಾಲೆಯು ಚಿರಕಾಲ ವಾಗಿ ನಡೆಯಲೆಂಬ ಸದುದ್ದೇಶದಿಂದ ಶ್ರೀಮಂತ ವಾರದ ಮಲ್ಲಪ್ಪ ಮಹೋದಯರ ಸ್ಮಾರಕವಾಗಿ ೫೦೦೦ (ಐದುಸಾವಿರ) ರೂಪಾಯಿ ಗಳನ್ನು ಆಶೀರ್ವದಿಸಿ ಸದರೀ ಪಾಠಶಾಲೆಯನ್ನು ಸಾರ್ವಜನಿಕವಾಗಿ ಮಾಡಿದರು. ಸಂಸ್ಕೃತವಿದ್ಯಾಪ್ರೇಮಿಗಳಾದ ಶ್ರೀಜಗದ್ಗುರುಗಳವರು ಸಂಸ್ಕೃತವಿದ್ಯಾವ್ಯಾಪಕತೆಗಾಗಿ ಮಾಡಿದ ಈ ಉದಾರ ಸಹಾಯವು

ಅತ್ಯಂತ ಸ್ತುತ್ಯವಾಗಿದ್ದು, ಅವರ ಮಠೋದ್ಧಾರ ಕರ್ತೃತ್ವವನ್ನು ಸೂಚಿಸುತ್ತದೆ. ಮಠಸ್ಥಾಪನಾಚಾರ್ಯರೂ, ಗುರುಸಾರ್ವಭೌಮರೂ, ಸದಾ ಶಿವಲಿಂಗಪೂಜಾಲೋಲರೂ, ಪರಮತಪಸ್ವಿಗಳೂ ಆಗಿರುವ ಶ್ರೀಜಗದ್ಗುರುಗಳವರ ಆಶೀರ್ವಾದಬಲದಿಂದ ಈ ಸಂಸ್ಕೃತವಿದ್ಯಾಲಯವು ಇಂದಿಗೂ ವಿರಾಜಿಸುತ್ತಲಿರುವುದು.

## ಮಠಮಂದಿರಪ್ರತಿಷ್ಠೋತ್ಸವ

ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಬಳ್ಳಾರಿ ಜಿಲ್ಲಾ ಕಲ್ಲುಹೊಳೆಯ ಮಠದ ವೇ|| ಶ್ರೀ ಕಲ್ಲುಹೊಳೆಯಪ್ಪನವರ ಪ್ರಾರ್ಥನೆಯಮೇರೆಗೆ ತಾ|| ೨೬-೪-೧೯೩೦ ನೆಯ ಇಸವಿಯಲ್ಲಿ ಮಹಾಸಂಸ್ಥಾನದ ಸಕಲಬಿರುದಾವಲಿಯೊಡನೆ ವಿಜಯಂಗೈಸಿ ನೂತನ ಶಿಲಾಮಠದ ಪ್ರವೇಶೋತ್ಸವವನ್ನು ನೆರವೇರಿಸಿದರು. ಶ್ರೀ ಕಳವಳಪ್ಪನವರು ಶ್ರೀ ಸನ್ನಿಧಿಗೆ ಗಜಲಕ್ಷ್ಮೀ ಸಮರ್ಪಣೆ ಮಾಡಿ ಧನ್ಯರಾದರು.

ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಕೊಟ್ಟೂರು ಜಾಗಟಗೇರಿ ದೊಡ್ಡವೀರಪ್ಪನವರ ತಮ್ಮಂದಿರಾದ ಸಣ್ಣವೀರಪ್ಪನವರು, ಚನ್ನವೀರಪ್ಪನವರು ಇವರ ಪ್ರಾರ್ಥನೆಯ ಪ್ರಕಾರ ೧೯೩೫ ರಲ್ಲಿ ಶ್ರೀ ರೇಣುಕಮಂದಿರದ ಶಂಕುಸ್ಥಾಪನೆಯ ಮಹೋತ್ಸವವನ್ನು ನೆರವೇರಿಸಿದರು. ಬಳಿಕ ಕೆಲವು ಕಾಲಾನಂತರ ನೂತನವಾಗಿ ನಿರ್ಮಿತವಾದ ಮಂದಿರದಲ್ಲಿ ಶ್ರೀಜಗದ್ಗುರು ಸಿದ್ಧೇಶ್ವರಶಿವಾಚಾರ್ಯರ ಅಮೃತಹಸ್ತದಿಂದ ಜಗದ್ಗುರು ರೇಣುಕರ ಮೂರ್ತಿಯು ಪ್ರತಿಷ್ಠಿತವಾಯಿತು. ಈ ಕಾರ್ಯದಲ್ಲಿ ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳೂ, ಹಸಗೋಡ ಪಟ್ಟಾಧ್ಯಕ್ಷರೂ ಮುಂತಾದ ಮಹನೀಯರೂ ಭಾಗವಹಿಸಿದ್ದರು.

೧೯೨೭ ನೇ ಇಸವಿಯಲ್ಲಿ ಜಗಲೂರ ತಾ|| ಕಲ್ಲೇದೇವರ ಪುರದಲ್ಲಿ ನೂತನವಾಗಿ ಸದರಿ ಗ್ರಾಮದ ಸಾಹುಕಾರ ಸಣ್ಣತಮ್ಮಪ್ಪನವರು

ತಮ್ಮಿಂದ ನಿರ್ಮಿಸಲ್ಪಟ್ಟಿರುವ ದೇವಸ್ಥಾನದಲ್ಲಿ ದೇವಪ್ರತಿಷ್ಠಾ ಮಹೋತ್ಸವಕ್ಕಾಗಿ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳನ್ನು ಪ್ರಾರ್ಥಿಸಿಕೊಂಡ ಮೇರೆಗೆ ಜಗದ್ಗುರುಗಳು ಅನುಮೋದಿಸಿ ಸಂಸ್ಥಾನ ಪದ್ಧತಿ ಮೇರೆಗೆ ಸಕಲ ಬಿರುದಾವಳಿಯೊಡನೆ ವಿಜಯಂಗೈಸಿ ಮಾಘ ಶು॥ ವಸಂತ ಪಂಚಮಿದಿವಸ ಮಹಾಲಿಂಗ ಪ್ರತಿಷ್ಠಾಪನೆಯ ಮಹೋತ್ಸವವನ್ನು ವಿಜೃಂಭಣೆಯಿಂದ ನಡೆಸಿದರು-ಆಗ ೬೦ ಮಾಹೇಶ್ವರ ವಟುಗಳಿಗೆ ಮಾಹೇಶ್ವರ ದೀಕ್ಷೋಪನಯನ ಸಂಸ್ಕಾರಗಳೂಸಹ ನಡೆದವು ಹತ್ತುಸಹಸ್ರ ಗಣ ಸಂತೃಪ್ತಿಯಾಯಿತು.

## ಉಜ್ಜಯಿನಿ ಸದ್ಧರ್ಮಪೀಠೋದ್ಧಾರ

ಪಂಡಿತರಾಜ ಶ್ರೀ ಕಾಶೀನಾಥಶಾಸ್ತ್ರಿಗಳು ಉತ್ತರಭಾರತದ ಗೋರಖಪುರ ಕಲ್ಯಾಣ ಮಾಸಿಕ ಪತ್ರಿಕೆಯ ವಿಶೇಷಾಂಕವಾದ ಸಂತಾಂಕದಲ್ಲಿ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಸಂಕ್ಷಿಪ್ತ ಚರಿತ್ರವನ್ನು ಪ್ರಕಾಶಮಾಡಿರುತ್ತಾರೆ. ಅದರಲ್ಲಿ—

ಶ್ರೀ ಜಗದ್ಗುರು ಪಂಚಾಚಾರ್ಯರ ಧರ್ಮಪೀಠಗಳು ಈ ಮಹಾತ್ಮರ ಪ್ರಭಾವದಿಂದ ವಿಶೇಷ ವೈಭವಸ್ಥಿತಿಗೆ ಬಂದವು. ಅನಾಯಕವಾಗಿದ್ದ ರಂಭಾಪುರೀ ಹಿಮವತ್ಕೇದಾರಪೀಠಗಳು ಈ ಮಹಾತ್ಮರ ಆಶೀರ್ವಾದಪ್ರಭಾವದಿಂದ ವಿಶೇಷಪ್ರಕಾಶಕ್ಕೆ ಬಂದವು। ಈ ಎರಡು ಪೀಠಗಳ ಜೀರ್ಣೋದ್ಧಾರವಿಷಯದಲ್ಲಿ ಈ ಮಹಾತ್ಮರು ತೋರಿಸಿದ ಸ್ವಾರ್ಥತ್ಯಾಗವು ವೀರಶೈವೇತಿಹಾಸದಲ್ಲಿ ಸುವರ್ಣಾಕ್ಷರಗಳಿಂದ ಬರೆದಿಡತಕ್ಕುದಾಗಿದೆ. ಈ ಮಹಾತ್ಮರ ಪ್ರಭಾವದಿಂದಲೇ ಮತಾಚಾರ್ಯರ ಸ್ವರೂಪವು ಜಗತ್ತಿಗೆ ತಿಳಿಯಿತು. ಮತಾಚಾರ್ಯರ ಪವಿತ್ರನಾಮಗಳು ಪ್ರತಿಯೊಬ್ಬ ವೀರಶೈವನ ಮುಖಕಮಲದಲ್ಲಿ ನರ್ತನಮಾಡಹತ್ತಿದವು. ಎಲ್ಲಿ ನೋಡಿದರೂ ಮತಾಚಾರ್ಯರ ಸಂಕೀರ್ತನವೇ ಕೇಳಿಸಹತ್ತಿತು.

ಒಟ್ಟಿಗೆ ಭರತಖಂಡದಲ್ಲಿರುವ ವೀರಶೈವರು ಈ ಜಗದ್ಗುರುಮೂರ್ತಿಯನ್ನು ಸಾಕ್ಷಾತ್ ಪರಮೇಶ್ವರನೆಂದು ಭಾವಿಸಿದ್ದರು.

ಶ್ರೀಕಾಶೀನಾಥಶಾಸ್ತ್ರಿ ಮಹಾಮಹೋದಯರು ಈ ಮಹಾತ್ಮರಲ್ಲಿ ಅನಿತರಸಾಧಾರಣ ಭಕ್ತಿಯನ್ನಿಟ್ಟಿದ್ದರು. ಈ ರೀತಿಯಾಗಿ ವೀರಶೈವಧರ್ಮಾಚಾರ್ಯರ ಕೀರ್ತಿಯನ್ನು ಭರತಖಂಡದಲ್ಲೆಲ್ಲ ಪ್ರಸಾರ ಮಾಡಿ ಕೃತಕೃತ್ಯರಾದ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳು ಉಜ್ಜಯಿನೀ ನಿಜಧರ್ಮಪೀಠದ ನೂತನ ನಿರ್ಮಾಣದ ಸಲುವಾಗಿ ತತ್ಪರರಾದರು. ೧೦೧ (ಏಕೋತ್ತರ) ಶತಸ್ಥಲಾನುಸಾರವಾಗಿ ೧೦೧ (ಏಕೋತ್ತರ) ಗೋರಕ್ಷಣೆಯಾಗಬೇಕು ಎಂದು ಮಹಾಗೋಶಾಲೆಯನ್ನೂ ಪಂಚಾಚಾರ್ಯಮಹಾಸಮ್ಮೇಲನ ಸಮಾರಂಭವನ್ನು ನಡಿಸಬೇಕೆಂದು ಪಂಚಾಚಾರ್ಯಸಭಾಮಂಟಪವನ್ನೂ ಶ್ರೀ ಜಗದ್ಗುರು ಮರುಳಸಿದ್ಧಮಹಾಸ್ವಾಮಿಯ ಮಹಾಗಣಾರಾಧನೆಯನ್ನು ಸದಾ ನಡಿಸಬೇಕೆಂದು ಮಹಾಪಾಕಶಾಲೆಯನ್ನೂ ಗೋಶಾಲೆಯಲ್ಲಿ ಶಿವಾರ್ಚನಮಾಡಬೇಕೆಂದು ಶಿವಪೂಜಾಮಂದಿರವನ್ನೂ ಭೂಗರ್ಭದಲ್ಲಿ ಕೋಶಾಗಾರ (ಖಜಾನಾಗೃಹ)ವನ್ನೂ ನಿರ್ಮಿಸಿದರು.



## ಜಗದ್ಗುರು ಭಗವತ್ಪಾದರ ಲೀಲೆಗಳು

ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರು ಬಾಳೆಹೊನ್ನೂರಿಗೆ ದಯಮಾಡಿಸಿದ ಸಮಯದಲ್ಲಿ ಅಲ್ಲಿಯ ನೂತನ ಜಗದ್ಗುರು ಶಿವಾನಂದ ರಾಜೇಂದ್ರ ಶಿವಾಚಾರ್ಯರೊಡನೆ ಸಮ್ಮಿಲಿತರಾಗಿ ಕುಳಿತಾಗ ಶಿಲಾ ಮಂಟಪದ ಮೇಲ್ಭಾಗದಿಂದ ಪಂಡಿತ ಶ್ರೀ ಹರೀಶ್ವರ ಶಾಸ್ತ್ರಿಗಳ

ಎರಡು ವರ್ಷದ ಹೆಣ್ಣು ಶಿಶುವು ಬಿದ್ದರೂ ಸಹ ಮಹಾಸನ್ನಿಧಿಯ ಕೃಪಾದೃಷ್ಟಿಯಿಂದ ಯಾವ ಅಪಾಯವೂ ಆಗದೆ ಬದುಕಿಕೊಂಡಿತು.

ಶ್ರೀ ದಡಿಸೂಗೂರು ದೇಶಿಕ ಮಠಾಧ್ಯಕ್ಷ ಅಮರಗಣನಾಥ ಶಿವಾಚಾರ್ಯರಿಗೆ ಶ್ರೀ ಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾ ಸ್ವಾಮಿಗಳ ನಾಮಸ್ಮರಣದಿಂದ ಮುರಿದ ಕೈ ನೋವು ಕಡಿಮೆಯಾಗಿ ವಾಸಿಯಾಯಿತು.

ಪಂಡಿತ ಶ್ರೀ ಕಾಶೀನಾಥಶಾಸ್ತ್ರಿಗಳಿಗೆ ವೀರಮಾಹೇಶ್ವರ ಪ್ರವರ ವೀರಭದ್ರನಂತೆ ವೀರಶೈವ ಧರ್ಮರಕ್ಷಣ ಕರ್ತೃತ್ವವರಪ್ರದಾನವನ್ನು ಮಾಡಿದರು.

ಬಳ್ಳಾರಿ ಪಟ್ಟಣವಾಸಿ ಸುಪ್ರಸಿದ್ಧ ಗಡಿಗಿ ಶ್ರೀ ಮ|| ರಾ|| ಶ್ರೀ ಚಿಕ್ಕವೀರಪ್ಪನವರ ಪುತ್ರರತ್ನ ಮರಿಯಣ್ಣನವರು ವಿಷಮಜ್ವರಗ್ರಸ್ತ ರಾಗಿದ್ದಾಗ್ಗೆ ಶ್ರೀ ಶಿವಯೋಗಿಗಳು ಸ್ವತಃ ಬಂದು ಭಸ್ಮಲೇಪನಮಾಡಿ ಮೃತ್ಯುಮುಖದಿಂದ ರಕ್ಷಣಮಾಡಿದರು.

ಹೋಟಗಿ ಮತ್ತು ಪಾಲಿಕೊಪ್ಪಗಳ ಶ್ರೀ ಪಟ್ಟಾಧ್ಯಕ್ಷರಿಗೆ ಶಿವಯೋಗಸಾಧನಕ್ಕೋಸ್ಕರ ಗುರುಕುಲಸ್ಥಾಪನೆಯ ವರದಾನ ಮಾಡಿದರು.

ಹೊಳಲಗುಂದಿ ಶ್ರೀ ಮ|| ರಾ|| ಶ್ರೀ ಪೊಂಡನಗೌಡರು ಮತ್ತು ಶ್ರೀ ಬಸವನಗೌಡರಿಗೆ ಸಕಲೈಶ್ವರ್ಯ ವರಪ್ರದಾನಮಾಡಿದರು.

ಕಲಬುರ್ಗಿ ಶ್ರೀ ಶರಣಬಸವೇಶ್ವರ ಸಂಸ್ಥಾನಾಧೀಶ್ವರ ಶ್ರೀ ಮ|| ರಾ|| ಶ್ರೀ ದೊಡ್ಡಪ್ಪಮಹಾರಾಜರಿಗೆ ಸಂಪೂರ್ಣ ಷಡ್ಗುಣೈಶ್ವರ್ಯ ವರಪ್ರದಾನಮಾಡಿದರು.

ಸೋಲಾಪುರ ನಗರವಾಸಿ ಸುಪ್ರಸಿದ್ಧ ಮ|| ರಾ|| ಶ್ರೀ ರಾವ ಸಾಹೇಬ ಥೋಬಡೆ ಇವರಿಗೆ ಪುತ್ರವರದಾನಮಾಡಿದರು.

ಕೊಟ್ಟೂರ ನಗರವಾಸಿ ಜಾಗಟಗೇರಿ ವಿ॥ ಮಠದ ಮ॥ ರಾ॥ ಸಣ್ಣವೀರಪ್ಪನವರ ಸತ್ಪುತ್ರರಾದ ಶ್ರೀ ಚನ್ನಬಸವಪ್ಪಯ್ಯನವರಿಗೆ ಪುತ್ರವರದಾನಮಾಡಿದರು.

ಬಳ್ಳಾರಿ ನಾಗರಿಕರ ಪ್ರಾರ್ಥನೆಗನುಸಾರ ಸುವೃಷ್ಟಿ ವರದಾನ ಮಾಡಿದರು.

ಹೊಳಗುಂದಿಯಲ್ಲಿ ಶ್ರೀಜಗದ್ಗುರುಗಳು ರುದ್ರಾಕ್ಷಮಾಹಾತ್ಮ್ಯವನ್ನು ಹೇಳಿ ಸರ್ವರೂ ರುದ್ರಾಕ್ಷಧಾರಣಮಾಡತಕ್ಕದ್ದೆಂದು ಬೋಧೆ ಮಾಡುವಷ್ಟರಲ್ಲಿಯೇ ಆಕಸ್ಮಾತ್ ಹೂವಿನಹಡಗಲಿಯಿಂದ ಪಂಚಾಚಾರ್ಯ ಪರಮಭಕ್ತಶಿಖಾಮಣಿಯಾದ ಮ॥ ರಾ॥ ಶ್ರೀ ಗುಗ್ರಿ ಹುಚ್ಚಪ್ಪನವರು ಕಾಶಿಯಿಂದ ತಂದ ರುದ್ರಾಕ್ಷಿಗಳ ರಾಶಿಯನ್ನು ತಂದು ಸನ್ನಿಧಿಗೆ ಸಮರ್ಪಿಸಿದರು. ಶ್ರೀಜಗದ್ಗುರು ಭಗವತ್ಪಾದರು ಸಮಸ್ತ ಶಿವಭಕ್ತರಿಗೆ ರುದ್ರಾಕ್ಷಧಾರಣಮಾಡಿಸಿದರು.

ಶ್ರೀಮದುಜ್ಜಯಿನೀ ಸದ್ಧರ್ಮಪೀಠಾಧೀಶ್ವರ ಶ್ರೀಜಗದ್ಗುರು ಚರಪಟ್ಟಾಧ್ಯಕ್ಷ ಸಿದ್ಧಲಿಂಗಶಿವಾಚಾರ್ಯ ಶಿವಯೋಗೀಶ್ವರರು ತಾ॥ ೨೨-೮-೧೯೨೭ ರಲ್ಲಿ ಬನ್ನಿಕಲ್ಲು ಮುಕ್ಕಾಮಿನಿಂದ ಅಲ್ಲಿಯ ಯಾವದ್ಭಕ್ತರ ಕಪ್ಪಕಾಣಿಕೆಗಳನ್ನು ಕೈಕೊಂಡು ಆಶೀರ್ವಾದವನ್ನಿತ್ತು ಹೂವಿನಹಡಗಲಿಗೆ ದಯಮಾಡಿಸುವ ಮಧ್ಯಮಾರ್ಗದಲ್ಲಿ ಹೊಳಗುಂದಿ ಗ್ರಾಮದ ಯಾವದ್ಭಕ್ತಮಾಹೇಶ್ವರಮಂಡಲಿಯು ನಿಯಮಿತವೇಳೆಗೆ ದಾರಿಯಲ್ಲಿ ಕಾದಿದ್ದು ಶ್ರೀ ಜಗದಾಚಾರ್ಯರ ದಿವ್ಯಾಗಮನವಾದ ಕೂಡಲೇ "ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾರಾಜಕೀಜೈ" ಎಂಬ ಜಯಘೋಷದಿಂದಲೂ ಶ್ರೀಜಗದ್ಗುರು ಭಜನಗಾನದಿಂದಲೂ ಸ್ವಾಗತಮಾಡಿತು. ಬಳಿಕ ಮಹಾಶಿವಯೋಗೀಶ್ವರರು ದರ್ಶನಾಶೀರ್ವಾದವನ್ನಿತ್ತು ದಯಮಾಡಿಸುವ ಸಂದರ್ಭದಲ್ಲಿ ಅಲ್ಲಿಯ ಭಕ್ತರ

ಕ್ಷೇಮಾದಿಗಳನ್ನು ವಿಚಾರಿಸಲಾಗಿ ಸಮಸ್ತಭಕ್ತರೂ ಪ್ಲೇಗಿನ ಭಯಂಕರ ಹಾವಳಿಯಿಂದ ಬಹು ಕಷ್ಟಕ್ಕೀಡಾಗಿದ್ದೇವೆಂದು ಬಿನ್ನೈಸಿಕೊಳ್ಳಲು ಮಹಾಶಿವಯೋಗೀಶ್ವರರು ಬಹಳ ಕನಿಕರಪಟ್ಟು ಶ್ರೀದಾರುಕಗಣೇಶ್ವರನು ಕೃಪೆಮಾಡುವನು ಭಯಪಡಬೇಡಿರೆಂದು ಅಭಯವನ್ನೀಯಲು ಸರ್ವರಿಗೂ ಆದ ಆನಂದಕ್ಕೆ ಪಾರವೇ ಇರಲಿಲ್ಲ. ಜಗದ್ಗುರುಗಳವರ ಆಜ್ಞೆಯಂತೆ ಪ್ಲೇಗುರೋಗವು ತತ್ಕ್ಷಣದಲ್ಲಿ ನಿಂತು ಮುಂದೆ ಯಾವ ಕೇಸುಗಳು ಆಗಲಿಲ್ಲವೆಂದು ತಿಳಿಸಲು ಸಂತೋಷವೆನಿಸುತ್ತದೆ. ತಪೋನಿಧಿಗಳ ಮಹಿಮೆಯೂ ಲೀಲೆಯೂ ಅಗಾಧವಾದದ್ದೆಂದು ಭಕ್ತರು ಸ್ತುತಿಸಿದರು.

ಧಾರವಾಡ ಜಿಲ್ಲಾ ಗದಗ ತಾಲೂಕು ಸಿಂಗ್ಟಾಲೂರು ಗ್ರಾಮ ವಾಸಿಗಳಾದ ಮ|| ರಾ|| ಶ್ರೀ ವಾಲಿ ಅಡಿವಪ್ಪನವರು ಸನ್ನಿಪಾತಜ್ವರ ವಿಶೇಷದಿಂದ ಬಹು ದುಃಖಕ್ಕೀಡಾಗಿದ್ದ ಸಮಯದಲ್ಲಿ ಉಜ್ಜಯಿನೀ ಸದ್ಧರ್ಮಪೀಠಾಧೀಶ್ವರ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಶಿವಯೋಗೀಶ್ವರರು ಸದರಿಯವರಿಗೆ ಸ್ವಪ್ನದಲ್ಲಿ ದರ್ಶನವನ್ನು ಕೊಟ್ಟು "ನೀನು ಉದ್ಧಾರವಾಗುವಿ, ಯೋಚಿಸ ಬೇಡ" ವೆಂಬ ಆಶೀರ್ವಚನವನ್ನಿತ್ತದ್ದರಿಂದ ಅವರಿಗೆ ಆರೋಗ್ಯವಾಯಿತು.

## ಸ್ವಪ್ನದಲ್ಲಿ ಶ್ರೀ ಸಿದ್ಧಲಿಂಗಶಿವಯೋಗೀಶ್ವರನ ಅನುಗ್ರಹ

ಚರಾಚರಾತ್ಮಕವಾದ ಈ ಪ್ರಪಂಚದಲ್ಲಿರತಕ್ಕ ಸಮಸ್ತ ಮಾನವ ಪ್ರಾಣಿಯು ಆತ್ಮೋದ್ಧಾರವಾಗಬೇಕಾದರೆ "ಗುರುರ್ದೈವಾತ್ಪರಂನಾಸ್ತಿ । ನಗುರೋರಧಿಕಂ" ಎಂಬ ಗ್ರಂಥೋಕ್ತಿಯಂತೆ ಗುರುವೇ ಪ್ರಾಮುಖ್ಯವೆಂದು ಆರ್ಯರು ಬೋಧಿಸುತ್ತಿರುವರು. ಪರೋಕ್ಷ ಅಥವಾ ಪ್ರತ್ಯಕ್ಷ ಗುರುಮಹಿಮೆಯನ್ನರಿಯಬೇಕಾದರೆ ತನ್ನ ಭೋಗ್ಯವಾದ ವಸ್ತುಗಳಲ್ಲಿ ಯಾವ ಪ್ರಕಾರ ಪ್ರೇಮವನ್ನಿಡುವನೋ ತದ್ವತ್ ಅಷ್ಟಾವರಣಾದ್ಯ

ಪದವಾಚ್ಯನಾದ ಆ ಗುರುಮೂರ್ತಿಯಲ್ಲಿ ನೈಜವಾದ ಭಕ್ತಿಯನ್ನಿರಿಸಿದ್ದಾದರೆ ಸದ್ಗುರುವಿನ ಮಹಿಮೆಯು ಸ್ಪಷ್ಟವಾಗಿ ಕಂಡುಬರುವದು. ಇದಕ್ಕೆ ನನ್ನ ಪ್ರತ್ಯಕ್ಷಾನುಭವಕ್ಕೆ ಬಂದ ಸ್ವಪ್ನದ ದೃಷ್ಟಾಂತವನ್ನು ಇಲ್ಲಿ ಹೇಳುತ್ತೇನೆ. ಅವಲೋಕಿಸಬೇಕಾಗಿ ಪ್ರಾರ್ಥನೆ.

ಈಗ ಸ್ವಲ್ಪ ದಿವಸಗಳ ಹಿಂದೆ ನನಗೆ ಒಂದು ಸ್ವಪ್ನವು ಬಿದ್ದಿತ್ತು. ಸ್ವಪ್ನ ಫಲಿತಾಂಶವು ಏನಾಗಬಹುದೆಂದು ವಿಚಾರಿಸುವಲ್ಲಿ ಮರಣಪ್ರಾಪ್ತಿಯೆಂದು ಗುರುಹಿರಿಯರು ಉಸುರಿದಪ್ರಕಾರ ಮುಂದೆ ೧೦-೧೨ ದಿವಸಗಳಲ್ಲಿಯೇ ನನಗೆ ಕಾಯಿಲೆಯು ಪ್ರಾಪ್ತವಾಯಿತು. ಬರಬರುತ್ತ ಭಯಂಕರವಾದ ಸನ್ನಿಪಾತಜ್ವರವು ಉತ್ಪನ್ನವಾಗಿ ಸ್ಮೃತಿತಪ್ಪಿ ಬಿದ್ದೆನು. ಸಂಸಾರಲೀಲಾಜಾಲದಲ್ಲಿ ತೊಡಕಿದ ನಾನು ದುಸ್ವಪ್ನಪ್ರಭಾವದಿಂದ ತೊಡರಿದ ಜ್ವರದ ತಾಪದಲ್ಲಿ ತೊಳಲಿ ಬಳಲಿ ಔಷಧೋಪಚಾರದಿಂದ ಪಾರುಗಾಣೆನೆಂಬುದನ್ನರಿತು ತದೇಕಮನಸ್ಸಿನಿಂದ ಗುರುಧ್ಯಾನದಲ್ಲಿಯೇ ಮಗ್ನನಾದೆನು.

ಹೀಗಿರುವಲ್ಲಿ ಒಂದಾನೊಂದುದಿವಸ ಪೂರ್ವಜನ್ಮ ಸುಕೃತ ವಿಶೇಷದಿಂದಲೋ ಏನೋ ಆ ಬೇನೆಯ ತಾಪದಲ್ಲಿ ಪುನಃ ಒಂದು ಸ್ವಪ್ನವನ್ನು ಕಂಡೆನು. ಅದೆಂತೆಂದೊಡೆ:—ಕೌಪೀನಧಾರಿಯೂ ಜಟಾಮುಕುಟಮಂಡಿತನೂ, ಭಸ್ಮರುದ್ರಾಕ್ಷಾಲಂಕೃತನೂ, ದಂಡಕಮಂಡಲುಯುಕ್ತನೂ ಆದ ಒಬ್ಬಾನೊಬ್ಬ ಶಿವಯೋಗಿಯು ಪ್ರತ್ಯಕ್ಷನಾದನು. ಕೂಡಲೇ ನಾನು ಹಸ್ತಾಂಜಲಿಬದ್ಧನಾಗಿ ಭಯಭಕ್ತಿಯಿಂದ ಸಾಷ್ಟಾಂಗವೆರಗಿ ನಿಂತುಕೊಂಡಾಕ್ಷಣವೇ ಆ ಗುರುವರ್ಯನು ನನ್ನ ಮಸ್ತಕದ ಮೇಲೆ ಹಸ್ತವನ್ನಿಟ್ಟು ಆಶೀರ್ವದಿಸಿದನು. ಕೂಡಲೇ ಈ ದಿವ್ಯ ತೇಜೋಮೂರ್ತಿಯು ಯಾರಿರಬಹುದೆಂಬ ಶಂಕೆಯು ಪ್ರಾಪ್ತವಾಯಿತು. ತತ್‍ಕ್ಷಣವೇ ಆ ಶಿವಯೋಗಿಯ ಮಸ್ತಕಾಗ್ರದಲ್ಲಿ ಪ್ರಭಾವಳಿಯೋಪಾದಿಯಲ್ಲಿ (ಅರ್ಧಚಂದ್ರಾಕೃತಿಯಂತೆ) ಶ್ರೀಜಗದ್ಗುರು ಸಿದ್ಧ

ಲಿಂಗಶಿವಾಚಾರ್ಯ ಮಹಾಸ್ವಾಮಿಯೆಂಬ ಅಕ್ಷರಗಳಿಂದ ಯುಕ್ತವಾದ ಒಂದು ಬರಹವು ಕೋಲ್ಮಿಂಚಿನಂತೆ ಹೊಳೆದು ಮಾಯವಾಯಿತು.

ಅನಂತರ ನಾನು ಸಂಪೂರ್ಣ ಎಚ್ಚತ್ತು ನಮ್ಮ ಗ್ರಾಮದಲ್ಲಿರತಕ್ಕ ಮಾಗಳದ ವೇ॥ ಸಿದ್ಧಾಂತಿ ಪಿ. ಎಂ. ಗಂಗಾಧರಶಾಸ್ತ್ರಿಗಳನ್ನು ಕರೆಯಿಸಿ ಸ್ವಪ್ನದ ಸಾರವನ್ನು ಅರುಹಿದೆನು. ಆಗ ಸದರಿ ಶಾಸ್ತ್ರಿಗಳವರು ನಿಗಮಾಗಮವಂದ್ಯನೂ ಭವರೋಗವೈದ್ಯನೂ ಆದ ಗುರುಮೂರ್ತಿಯ ದರ್ಶನವಾದಮೇಲೆ ನಿನ್ನ ಜಾಡ್ಯವು ದೂರವಾಯಿತು; ಚಿಂತಿಸಬೇಡವೆಂದು ಹೇಳಿದರು. ಪುನಃ ನಾನು ಶಾಸ್ತ್ರಿಗಳವರನ್ನು ಕುರಿತು ಸ್ವಪ್ನದಲ್ಲಿ ದೃಷ್ಟವಾದ ಗುರುಗಳಾರಿರಬಹುದೆಂದು ಪ್ರಶ್ನೆ ಮಾಡಲು ಶಾಸ್ತ್ರಿಗಳು ನೀನು ಸ್ವಪ್ನದಲ್ಲಿ ಕಂಡ -ಲಕ್ಷಣಗಳಮೇಲಿಂದ ವಿಚಾರಮಾಡಿ ನೋಡುತ್ತಿರಲಿಕ್ಕೆ ಸದ್ಯಃ ಉಜ್ಜಯಿನೀ ಪೀಠಾರೋಹಣ ಮಾಡಿರತಕ್ಕ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳವರೇ ನಿನ್ನ ಸ್ವಪ್ನದಲ್ಲಿ ದರ್ಶನವನ್ನಿತ್ತಿರುವರು. ಇವರು ಮಹಾತಪಸ್ವಿಗಳು; ಈ ಮಹನೀಯರು ವೀರಶೈವ ಧರ್ಮವೆಂಬ ರಾಜ್ಯಕ್ಕೆ ಚಕ್ರವರ್ತಿಗಳು (ಗುರುಸಾರ್ವಭೌಮರು) ಆದಾಗ್ಯೂ ವಸ್ತುವಾಹನಾದಿ ವೈಭವಾಡಂಬರದಲ್ಲಿ ಮನವಿಡದೆ ಜಪತಪೋನುಷ್ಠಾನಗಳಲ್ಲಿಯೇ ಕಾಲ ಕಳೆಯುತ್ತ ತಮ್ಮಶರೀರವಾಸನೆಯನ್ನಳಿದು ಸುಖದುಃಖಗಳಿಗೆ ನೀರೆರೆದು ಕೇವಲ ಭಕ್ತೋದ್ಧಾರಾರ್ಥವಾಗಿಯೇ ಸಂಚರಿಸುತ್ತಿರುವರು. ಇವರ ಚರಿತ್ರೆಯು ಅಗಾಧವಾಗಿದೆ. ಈ ಗುರುವರ್ಯರ ಕಾಲದಲ್ಲಿ ಕಾಲಾನುಗುಣವಾಗಿ ಮೂಲೆಗುಂಪಾಗಿ ಬಿದ್ದಿದ್ದ ಪಂಚಪೀಠಗಳ ಉನ್ನತಿಯಾಯಿತು. ಮೈಸೂರು ರಾಜಧಾನಿಯಲ್ಲಿ ಪಂಚಾಚಾರ್ಯಪ್ರಭೆಯು ಅವತರಿಸಿತು. ಮತ್ತು ಲಕ್ಷಾಂತರ ರೂಪಾಯಿ ಸಾಲದಲ್ಲಿ ಮುಳುಗಿ ಪರಾಧೀನವಾಗಿಹೋಗುತ್ತಿದ್ದ ಶ್ರೀಜಗದ್ಗುರು ಕೇದಾರಪೀಠವು ಈ

ಮಹಾನುಭಾವರ ಪ್ರಯತ್ನವಿಶೇಷದಿಂದಲೇ ಪ್ರಜ್ವಲಿಸಿತು. ಈಗ ೩-೪ ವರ್ಷಗಳ ಹಿಂದೆ ಅನಾಯಕವಾಗಿದ್ದ ಶ್ರೀರೇಣುಕಾಚಾರ್ಯರ ಪೀಠಕ್ಕೆ ಈ ಗುರುವರ್ಯರ ತಪಃಪ್ರಭಾವದಿಂದಲೇ ಅದ್ವಿತೀಯ ಪಾಂಡಿತ್ಯವುಳ್ಳ ಗುರುವರ್ಯರು ದೊರೆತರೆಂದೂ ಇತ್ಯಾದ್ಯನಂತ ಚರಿತ್ರಗಳನ್ನು ಹೇಳಿದರು. ಆಗ ನಾನು ಸಂತೋಷಭರಿತನಾದೆನು. ಬರಬರುತ್ತ ನನ್ನ ಜಾಡ್ಯವು ಕಡಿಮೆಯಾಗುತ್ತ ೧೦-೧೫ ದಿವಸಗಳಲ್ಲಿ ಸಂಪೂರ್ಣ ಗುಣ ಹೊಂದಿದೆನು.

ತರುವಾಯ ಆ ಜಗದ್ಗುರುಗಳವರ ದರ್ಶನಾಶೀರ್ವಾದವನ್ನು ಪಡೆಯಬೇಕೆಂಬ ಲವಲವಿಕೆಯು ನನ್ನಲ್ಲಿ ಉತ್ಪನ್ನವಾಗಲು ಹರಪನಹಳ್ಳಿಗೆ ಹೋಗಿ ಗುರುವರ್ಯರ ದರ್ಶನಹೊಂದಿದೆನು. ನಾನು ಸ್ವಪ್ನದಲ್ಲಿ ಕಂಡ ಮೂರ್ತಿಯ ಯಾವತ್ತು ಸಲ್ಲಕ್ಷಣಗಳು ಅಚ್ಚಳಿಯದಂತೆ ನನಗೆ ಗೋಚರಿಸಲು ಸಂತೋಷಾಬ್ಧಿಯಲ್ಲಿ ಮುಳುಗಿ ಶ್ರೀಜಗದ್ಗುರುಗಳವರಿಗೆ ದೀರ್ಘದಂಡ ನಮಸ್ಕಾರವಂ ಮಾಡಿ ಫಲಾಶೀರ್ವಾದವನ್ನು ಹೊಂದಿ ಬಂದೆನು.

ವಾಚಕಮಹಾಶಯರೇ, ಗುರುವು ಸಾಮಾನ್ಯನಲ್ಲವೆಂಬ ಅಂಶವನ್ನು ನಾನು ನನ್ನ ಪ್ರತ್ಯಕ್ಷಾನುಭವದಿಂದ ನಿಃಸಂದೇಹವಾಗಿ ಹೇಳಬಲ್ಲೆನು. ಕಾರಣ ಪ್ರತಿಯೊಬ್ಬರು "ಗುರುಭಕ್ತಿರಹಿತನಿಗೆ ಪರಮುಕ್ತಿಯಿಲ್ಲ" ಎಂಬ ನಾಣ್ಣುಡಿಯಂತೆ ಧರ್ಮಗುರುಗಳಲ್ಲಿ ನೈಜವಾದ ಭಕ್ತಿಯನ್ನಿಟ್ಟು ಮುಕ್ತಿಭಾಗಿಗಳಾಗಬೇಕೆಂದು ಹಾರೈಸುತ್ತೇನೆ.

ಅಡಿವಪ್ಪ ಬಸಪ್ಪ ವಾಲಿ ಸಾ॥ ಸಿಂಗಟಾಲೂರು

(ಪಂಚಾಚಾರ್ಯಪ್ರಭಾ) ಗದಗ ತಾಲೂಕು

ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ಮಹಾಶಿವಯೋಗೀಶ್ವರರು ೧೯೨೮ ರಲ್ಲಿ ಮೈಸೂರಿಂದ ಉತ್ತಮವಾದ ವೀಣಾವಾದ್ಯವನ್ನು

ತರಿಸಿಕೊಂಡು ಕೆಲವುದಿವಸ ಏಕಾಂತದಲ್ಲಿ ವೀಣೆಯನ್ನು ನುಡಿಸುತ್ತ ನಾದಬ್ರಹ್ಮೈಕತೆಯನ್ನು ಪಡೆದು ನಾದಾನಂದದಲ್ಲಿ ರಮಿಸುತ್ತಿದ್ದರು. ಸಾಮಾನ್ಯವಾಗಿ ಆ ಕಾಲದಲ್ಲಿ ಸನ್ನಿಧಿಯಲ್ಲಿ ಯಾರಿಗೂ ಮಾತನಾಡುವುದಕ್ಕೆ ಅವಕಾಶವಿರಲಿಲ್ಲ.

ಈ ಪ್ರಕಾರ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರ ಮಹಾ ಶಿವಯೋಗಮಾಹಾತ್ಮ್ಯವು ಜಗತ್ಪ್ರಖ್ಯಾತವಾಯಿತು. ಈದೃಶ ಯೋಗ ಮಾಹಾತ್ಮ್ಯಖ್ಯಾತಿಗೆ ಪರಮಶಿವ ಪೂಜಾನಿಷ್ಠೆಯೇ ಮುಖ್ಯ ಕಾರಣವಾಗಿತ್ತು. ಈ ನಿಷ್ಠೆಗೆ ಪರಮಶಿವನಲ್ಲಿರುವ ಭಕ್ತಿಯೇ ಮೂಲಜನನಿಯಾಗಿದೆ. ಈ ಭಕ್ತಿಯು ಶ್ರವಣ ಕೀರ್ತನ ಸ್ಮರಣ ಪಾದಸೇವನ ಅರ್ಚನ ವಂದನ ದಾಸ್ಯ ಸಖ್ಯ ಮತ್ತು ಆತ್ಮನಿವೇದನವೆಂದು ನವವಿಧವಾಗಿ ಸ್ಮೃತವಾಗಿದೆ.

ಶಿವಕೀರ್ತನದಿಂದ ಶಿವನು ಪ್ರತ್ಯಕ್ಷನಾಗುತ್ತಾನೆ :—

ಸಕೀರ್ತ್ಯಮಾನಃ ಶೀಘ್ರಮೇವಾವಿರ್ಭವತಿ ಅನುಭಾವ
ಯತಿಚ ಭಕ್ತಾನ್ ॥
(ನಾರದಭಕ್ತಿದರ್ಶನ)

ಭಕ್ತಿಗಮ್ಯಂ ಪರಂ ತತ್ತ್ವಂ ಸ್ವಾಂತರ್ಲೀನೇನ ಚೇತಸಾ ॥
(ಯೋಗಶಿಖೋಪನಿಷತ್)

ಶಿವನನ್ನು ಅನವರತ ಸ್ಮರಿಸುವವನ ಚಿತ್ತವು ಶಿವನಲ್ಲಿಯೇ ವಿಲೀನವಾಗುತ್ತದೆ. ಈ ನಿರಂತರ ಶಿವಸ್ಮರಣದಿಂದ ಮಹೇಶ್ವರನ ಸರ್ವಜ್ಞತ್ವ ನಿತ್ಯತೃಪ್ತಿತ್ವ ಅನಾದಿಬೋಧ ಸ್ವತಂತ್ರತೆ ಅಲುಪ್ತಶಕ್ತಿ ಮತ್ತು ಅನಂತಶಕ್ತಿ ಇವುಗಳು ಶಿವಭಕ್ತರ ಹೃದಯದಲ್ಲಿ ಸ್ಫುರಿಸುತ್ತವೆ.

ಮಾಮನುಸ್ಮರತಶ್ಚಿತ್ತಂ ಮಯ್ಯೇವಾನುವಿಲೀಯತೇ ।
ಸರ್ವಜ್ಞತ್ತ್ವಂ ಪರೇಶತ್ತ್ವಂ ಸರ್ವಸಂಪೂರ್ಣಶಕ್ತಿತಾ ।
ಅನಂತಶಕ್ತಿಮತ್ತ್ವಂ ಚ ಮಮಾನುಸ್ಮರಣಾದ್ ಭವೇತ್ ॥
(ಯೋಗಶಿಖೋಪನಿಷತ್)

ಶಿವನಕಥಾಗೋಷ್ಟಿಗೆ ಕಿವಿಗೊಡುವ ।
ಶಿವನಂಪೊಗಳೆರಸನೆಗುಡಿಯಿಡುವ ।
ಶಿವಮೂರ್ತಿಗಳಂ ನೆನೆವುತ್ತಿರ್ಪ ।
ಶಿವನೋಲಗದೊಳು ಸಲೆನೆಲಸಿರ್ಪ ।
ಶಿವನಲ್ಲಿಯೇ ಪರಿಚರ್ಯವನುಳ್ಳ ।
ಶಿವನರ್ಚನೆಯೊಳಗಭಿರತಿಯುಳ್ಳ ।
ಶಿವನಸಿಪದದೊಳಗೆರಕತೆಯುಳ್ಳ ।
ಶಿವಸಂಪದದೊಳು ಸುಸ್ಥಿತಿಯುಳ್ಳ ।
ಶಿವನಿಗೆ ತನುಮುಖ್ಯವನರ್ಪಿಸುತ ।
ನವವಿಧಸದ್ಭಕ್ತಿಯೊಳಿಂತರುತ ।
ಭಕ್ತಿಯರೂಪಿಂದಾ ಸಂವಿತ್ತು ।
ಭಕ್ತರೊಳೈದಿಹುದೆಲ್ಲಹೊತ್ತು ॥೯॥

ಈ ನವವಿಧ ಭಕ್ತಿಯುಪಥದಿಂದ । ಆ ನಿಖಿಳರ್ಗೀಶ್ವರನೊಲವಿಂದ ।
ಅಷ್ಟೈಶ್ವರ್ಯಂ ಗುಣವಾರೆಂಬ । ತುಷ್ಟಿ ಸದಾ ಸರ್ವಜ್ಞತೆಯೆಂಬ ।
ನಿತ್ಯಸುಬೋಧಂ ಬೇರೊಂದೆಂಬ । ಸತ್ಯಮೆನಲ್ ಸ್ವಾತಂತ್ರ್ಯಮಿದೆಂಬ।
ತಾನಳಿಯದ ಶಕ್ತಿತ್ತ್ವವದೆಂಬ । ನಾನಾಶಕ್ತಿತ್ತ್ವಂ ತಾನೆಂಬ ।
ಆರಂಗಮಿವೀಶನ ಪದವಕ್ಕು । ವಿಾರಿದ ಭಕ್ತಿಗೆ ಯದೆಫಲವಕ್ಕು ।
ಆ ನಿಜಭಾಗ್ಯಂ ಸಿದ್ಧಿಸಿದವರು।ಸೂನುತಿಳಿಯೇ ಮುಕ್ತನೆರ್ಣೀಡವರು ॥

(ಶ್ರೀ ನಿಜಗುಣಶಿವಯೋಗಿಕೃತ ಪರಮಾರ್ಥಗೀತೆ)

ವೀರಶೈವಸಿದ್ಧಾಂತದಲ್ಲಿ ಭಕ್ತಿಯು ಷಡ್ವಿಧವಾಗಿ ಹೇಳಲ್ಪಟ್ಟದೆ. ಈ ಷಡ್ವಿಧ ಭಕ್ತಿಯಿಂದ ಜೀವಭಾವದಲ್ಲಿ ಸಂಕುಚಿತವಾದ ಶಕ್ತಿಗಳು ಪುನರಪಿ ವಿಕಸಿತಗಳಾಗುತ್ತವೆ. ಬಂಧನಿವೃತ್ತಿಯಾಗಿ ಶಿವಸ್ವರೂಪ ಮುಕ್ತಿಯು ಲಭಿಸುತ್ತದೆ.

ಶ್ರೀಜಗದ್ಗುರು ಸಿದ್ಧಲಿಂಗಶಿವಯೋಗಿಗಳು ಮೇಲೆ ಹೇಳಿದಂತೆ ಪರಮ ಶಿವಭಕ್ತಿ-ಧ್ಯಾನ-ಜ್ಞಾನ-ಅರ್ಚನ ಮತ್ತು ಶಿವವ್ರತರೂಪ ಶಿವಯೋಗಾಭ್ಯಾಸದಿಂದ ಯೋಗಸಿದ್ಧರಾಗಿದ್ದರು. ಜೀವನ್ಮುಕ್ತರಾಗಿದ್ದರು. ಈ ಮಹಾತ್ಮರ ಮಹಿಮೆಗಳು ವಿಶ್ವದಲ್ಲಿ ವಿಖ್ಯಾತವಾಗಿರುತ್ತವೆ.

"ಅಹಿಂಸಾಪ್ರತಿಷ್ಠಾಯಾಂ ತತ್ಸನ್ನಿಧೌ ವೈರತ್ಯಾಗಃ ।"

(ಯೋಗದರ್ಶನ)

ಈ ಯೋಗಸೂತ್ರ ರೀತ್ಯಾ ಶ್ರೀಜಗದ್ಗುರು ಸಿದ್ಧಲಿಂಗಶಿವಯೋಗಿಗಳು ಬುಕ್ಕಾಂಬುಧಿ ಗಿರಿಗುಹೆಯೊಳಗೆ ಅನುಷ್ಠಾನ ಮಾಡುವ ಸಂದರ್ಭದಲ್ಲಿ ಗೋವ್ಯಾಘ್ರಗಳು, ಅಹಿನಕುಲಗಳು, ಮಿತ್ರಭಾವದಿಂದ ವಾಸಿಸುತ್ತಿದ್ದವು.

ಜಾರ್ಶೀ ನಗರದೊಳಗೆ ಶ್ರೀಜಗದ್ಗುರು ಸನ್ನಿಧಿಯಲ್ಲಿ ಅಹಿನಕುಲಗಳು ವೈರಭಾವವನ್ನು ತ್ಯಜಿಸಿದ ವೃತ್ತಾಂತವು ಸಹಸ್ರ ಜನಸ್ತೋಮಕ್ಕೆ ಪ್ರತ್ಯಕ್ಷ ನಿದರ್ಶನವಾಯಿತು.

ಅಸ್ತೇಯಪ್ರತಿಷ್ಠಾಯಾಂ ಸರ್ವರತ್ನೋಪಲಬ್ಧಿಃ ।

(ಯೋಗದರ್ಶನ)

ಈ ಯೋಗಸೂತ್ರರೀತ್ಯಾ ಶ್ರೀಶಿವಯೋಗಿಗಳ ಸನ್ನಿಧಿಯಲ್ಲಿ ಸರ್ವರತ್ನಗಳೂ ಉಪಲಬ್ಧವಾಗಿದ್ದವು.

ಇಂತಹ ಸದ್ಗುಣಗಣರತ್ನವಿಭೂಷಿತ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಯೋಗೀಶ್ವರರು ಕೂಡ್ಲಿಗಿ, ಕೊಟ್ಟೂರು, ಹರಪನಹಳ್ಳಿ, ಹೂವಿನ ಹಡಗಲಿ, ಹಿರೇಹಡಗಲಿ, ಹೊಸಪೇಟೆ, ಕಂಪಲಿ, ರಾಮಸಾಗರ, ಹಂಪಸಾಗರ, ಬನ್ನಿಕಲ್ಲ, ಹೊಳಗುಂದಿ, ಜಗಲೂರು, ಕಾನಾಮಡು, ಬಳ್ಳಾರಿ ಮುಂತಾದ ಗ್ರಾಮಾನುಗ್ರಾಮಗಳಲ್ಲಿ ಸಂಚರಿಸುತ್ತ ಮಠದ

ಜೀರ್ಣೋದ್ಧಾರ ಮತ್ತು ಜ್ಞಾನಗುರು ವಿದ್ಯಾಪೀಠ ಇವುಗಳ ಸಲುವಾಗಿ ಧನನಿಧಿಯನ್ನು ಕೂಡಿಸುತ್ತ ಶಿಷ್ಯಗಣಕ್ಕೆ ಶಿವಧರ್ಮವನ್ನುಪದೇಶ ಮಾಡುತ್ತ ಶಿಷ್ಯರ ಕಾಣಿಕಾದಿಗಳನ್ನು ಸ್ವೀಕರಿಸುತ್ತ ಚಿತ್ರದುರ್ಗ ಡಿ|| ತುರುವನೂರು ಗ್ರಾಮಕ್ಕೆ ಆಗಮಿಸಿದನಂತರ ತುರ್ಯಾತೀತಾವಸ್ಥೆ ಯನ್ನು ಹೊಂದಿದರು. ಈ ವರ್ತಮಾನವು ವಾಯುವೇಗಕ್ಕಿಂತಲೂ ಅತಿ ತೀವ್ರವಾಗಿ ಎಲ್ಲ ನಾಡಿನಲ್ಲಿ ಪಸರಿಸಿತು. ಕೂಡಲೆ ಶ್ರೀ ರಂಭಾಪುರೀ ಜಗದ್ಗುರು ಶಿವಾನಂದರಾಜೇಂದ್ರಶಿವಾಚಾರ್ಯ ಮಹಾ ಸ್ವಾಮಿಗಳೂ, ಶ್ರೀ ಹಿಮವತ್ಕೇದಾರ ಜಗದ್ಗುರು ಚಿದ್ಘನಲಿಂಗ ಶಿವಾಚಾರ್ಯ ಮಹಾಸ್ವಾಮಿಗಳೂ ಪಂಡಿತ ಶ್ರೀಕಾಶೀನಾಥಶಾಸ್ತ್ರಿ ಗಳೂ ಹಸಗೋಡ ಮತ್ತು ಸಿದ್ಧಾಪೂರ ಗ್ರಾಮಗಳ ಶ್ರೀ ಪಟ್ಟಾಧ್ಯಕ್ಷರೂ ಮೊದಲಾದ ಅನಂತಾನಂತ ಮಹೋದಯರು ಆಗಮನಮಾಡಿ ಮಹಾ ಶಿವಯೋಗಾನಂದದಲ್ಲಿ ಅಂತರ್ಮುಖಿಗಳಾಗಿದ್ದ ಜಗದ್ಗುರುಗಳನ್ನು ಕಾರಿನಲ್ಲಿ ಮೂರ್ತಮಾಡಿಸಿಕೊಂಡು ಉಜ್ಜಯಿನೀ ಮಹಾಸಂಸ್ಥಾನ ಮಠಕ್ಕೆ ಸಾಗಿಸಿಕೊಂಡು ಬಂದರು. ತಥಾಪಿ ಶ್ರೀ ಶಿವಯೋಗೀ ಶ್ವರರು ಬಹಿರ್ಮುಖರಾಗದೆ ತಾ|| ೧೨-೧-೧೯೩೬ ನೆಯ ಇಸವಿಯ ಯುವನಾಮಸಂವತ್ಸರ ಪುಷ್ಯ ಕೃಷ್ಣಪಕ್ಷದ ಚತುರ್ಥಿ ದಿವಸ ಕೈಲಾಸ ಗಮನಮಾಡಿದರು. ಅನಂತರ ಶ್ರೀ ರಂಭಾಪುರೀ ಜಗದ್ಗುರು ಶಿವಾನಂದರಾಜೇಂದ್ರಶಿವಾಚಾರ್ಯರ ನೇತೃತ್ವದಲ್ಲಿ ಅಂತ್ಯೇಷ್ಟಿ ಕ್ರಿಯಾದಿಗಳು ನಡೆಸಲ್ಪಟ್ಟವು. ಉಜ್ಜಯಿನೀ ಶ್ರೀಮರುಳಸಿದ್ಧೇಶ್ವರ ಮಹಾದೇವಾಲಯದ ಹಿಂಭಾಗದಲ್ಲಿ ಉತ್ತರಾಭಿಮುಖವಾಗಿ ಶ್ರೀಮಹಾ ಶಿವಯೋಗೀಶ್ವರರ ಸಮಾಧಿ ಮಂದಿರವು ನಿರ್ಮಿತವಾಯಿತು. ಈ ಮಂದಿರದ ಮೇಲೆ ಶಿಖರವಿದೆ. ಪಂಚಕಲಶಗಳೂ ಪಂಚಾಚಾರ್ಯ ಪತಾಕೆಗಳೂ ವಿರಾಜಿಸುತ್ತಲಿವೆ.



## ಶ್ರೀಜಗದ್ಗುರು ಸಿದ್ಧಲಿಂಗಶಿವಯೋಗಿ ಸ್ತವನ

ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನಾಧಿಪತಿಗಳಾದ ಜಗದ್ಗುರು ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳವರು ಶ್ರೀಜಗದ್ಗುರು ಮರುಲಾರಾಧ್ಯನೇ ಸಿದ್ಧಲಿಂಗಶಿವಾಚಾರ್ಯರೂಪದಿಂದ ತಲೆದೋರಿದನೋ ಎಂಬಂತೆ ಶಮದಮಾದಿಸದ್ಗುಣಮಂಡಿತರೂ ಲಿಂಗನಿಷ್ಠಾಲೋಲರೂ ಪೂಜಾಧುರೀಣರೂ ಬ್ರಹ್ಮವಿದ್ಯಾವಿಭೂಷಿತರೂ ಪಂಚಶಿಖಾಯುಕ್ತರೂ ಪಂಚಮುದ್ರಾಂಕಿತರೂ ವೈರಾಗ್ಯಶೀಲರೂ ವಶಿಷ್ಠನೋಪಾದಿಯಲ್ಲಿ ತಪೋನಿಷ್ಠರೂ ಸುರಗುರುವಿನಂತೆ ವಾಗ್ಮಿಗಳೂ ದೂರ್ವಾಸನಂತೆ ಶಾಪಾನುಗ್ರಹಸಮರ್ಥರೂ ನಲಹರಿಶ್ಚಂದ್ರಾದಿಗಳಂತೆ ಸತ್ಯಸಂಧರೂ ಶೈವಧರ್ಮಾನುಷ್ಠಾನನಿಷ್ಣಾತರೂ ಆಗಿದ್ದರು. ಈ ಮಹಾನುಭಾವನೆಂಬ ಸೂರ್ಯನು ಸದ್ಧರ್ಮಪೀಠವೆಂಬ ಗಗನಮಂಡಲವನ್ನೇರಿ ಶೈವಪ್ರಪಂಚದಲ್ಲಿ ಬಹು ಕಾಲದಿಂದ ಹರಡಿದ್ದ ಅಜ್ಞತ್ವವೆಂಬ ಮಹಾಂಧಕಾರವನ್ನು ದೂರಮಾಡಿದನು. ರಾಕ್ಷಸರ ಹಾವಳಿಯಿಂದ ದೇವತೆಗಳು ತಲೆಮರೆಯಿಸಿಕೊಂಡಂತೆ ಅಪಸಿದ್ಧಾಂತಿಗಳಹಾವಳಿಯಿಂದ ಹುದುಗಿಹೋಗಿದ್ದ ವಿದ್ವಜ್ಜನಗಳು ಯಾವ ಮಹಾನುಭಾವರ ಆಶ್ರಯದಿಂದ ಉಚ್ಚಶಿಖರವನ್ನೇರಿದರೋ ಯಾವ ಮಹಾನುಭಾವರು ಭರತಖಂಡದ ಅನೇಕ ಪ್ರಾಂತಗಳಲ್ಲಿರುವ ಶಿವಭಕ್ತರನ್ನು ಅಷ್ಟಾವರಣ ಪಂಚಾಚಾರ ಷಟ್ಸ್ಥಲ ಮುಂತಾದ ಮುಕ್ತಿಸಾಮ್ರಾಜ್ಯಸಾಧನೆಗಳನ್ನುಪದೇಶಿಸಿ ಪವಿತ್ರಗೊಳಿಸಿದರೋ ಸದಾಚಾರದಲ್ಲಿಯೇ ಪ್ರಾಣವನ್ನಿರಿಸಿಕೊಂಡು ಸಾಮಾನ್ಯತಃ ಪ್ರಾಣಿಮಾತ್ರದಲ್ಲಿ ದಯಾರಸವುಳ್ಳವರಾಗಿದ್ದು ಶಿವಭಕ್ತರಲ್ಲಿ ಪುತ್ರನಿರ್ವಿಶೇಷವಾದ ವಾತ್ಸಲ್ಯವನ್ನು ಯಾವ ಮಹಾನುಭಾವರು ತೋರಿಸುತ್ತಿದ್ದರೋ ತಮ್ಮ ಪೀಠವನ್ನುದ್ಧರಿಸಿದುದಲ್ಲದೆ ಹೇಳುವುದಕ್ಕೆ ಹೆಸರಿಲ್ಲದೆ ಕೈಬಿಟ್ಟು ಹೋಗುತ್ತಿದ್ದ ಕೇದಾರಮಹಾಪೀಠವನ್ನೂ ಮತ್ತು ಶಿಥಿಲವಾಗಿದ್ದ ಶ್ರೀಕಾಶೀ ಪೀಠವನ್ನೂ ಉದ್ಧರಿಸಿ ಶಾಸ್ತ್ರಮುಖ

ದಿಂದ ಪರೋಕ್ಷವಾಗಿ ಕೇಳಲ್ಪಡುತ್ತಿದ್ದ ಪಂಚಮಹಾಪೀಠಗಳನ್ನು ಸರ್ವಜನಗಳ ದೃಷ್ಟಿಗೋಚರಗಳನ್ನಾಗಿ ಮಾಡಿ ಯಾವ ಮಹಾನುಭಾವರು ಪಂಚಪೀಠ ಎಂಬ ಶಬ್ದವನ್ನು ಸಾರ್ಥಕಗೊಳಿಸಿದರೊ ಕೆಲ ವರ್ಷಗಳ ಹಿಂದೆ ವೀರಶೈವ ಸಮಾಜಪ್ರವಾಹವು ದ್ವಿಮುಖವಾಗಿ ಹರಿಯುತ್ತಿರಲು ಅನಾಯಕವಾಗಿ ಹೋಗುತ್ತಿದ್ದ ಶ್ರೀರಂಭಾಪುರೀಪೀಠವು ಪುನಃ ಸನಾಯಕವಾಗುವ ವರೆಗೆ ಸ್ವಸ್ಥಾನವನ್ನು ಸೇರುವುದಿಲ್ಲವೆಂದು ವೀರಪ್ರತಿಜ್ಞೆಯನೆಸಗಿ ಘೋರಾರಣ್ಯದಲ್ಲಿ ನಿರಾಹಾರಿಯಾಗಿ ತಪವಂಗೈಯುತ್ತ ರಂಭಾಪುರೀ ಮಹಾಪೀಠವನ್ನು ದಶದಿಕ್ಕುಗಳಲ್ಲಿ ಯಶೋವೈಭವದಿಂದ ಕೂಡಿದುದನ್ನಾಗಿ ಮಾಡಿದುದಲ್ಲದೆ ಮೈಸೂರು ರಾಜ್ಯಾಧಿಪತಿಗಳಾದ ಮಹಾಪ್ರಭುಗಳ ಪ್ರೇಮಕಟಾಕ್ಷಬದ್ಧವಾದುದನ್ನಾಗಿ ಯಾವ ಮಹಾನುಭಾವರು ಮಾಡಿದರೋ ದುರ್ವಾದಿದಂತಿಗಳ ಕೋಲಾಹಲದಿಂದ ಬೊಗ್ಗಡವಾಗಿ ಹೋಗುತ್ತಿದ್ದ ವೀರಶೈವ ಸಿದ್ಧಾಂತವೆಂಬ ಅಮೃತಸರೋವರವನ್ನು ಯಾವ ಮಹಾನುಭಾವರು ಸಿದ್ಧಾಂತ ಮೃದುನುಡಿಗಳೆಂಬ ಅಮೃತಕಿರಣದಿಂದ ನಿರ್ಮಲಗೊಳಿಸುತ್ತಿದ್ದರೋ ಆ ಮಹಾನುಭಾವರು ತಾವು ಗುರುಸಾರ್ವಭೌಮ ಪದವಿಯಲ್ಲಿದ್ದು ಶಿಷ್ಯರ ದಂಡನಖಂಡನಾದಿಗಳ ಕರ್ತೃತ್ತ್ವವನ್ನು ಹೊಂದಿದ್ದರೂ ಪ್ರಾಪಂಚಿಕವಾದ ವೈಭವಗಳಲ್ಲಿ ಜಿಹಾಸೆಯುಳ್ಳವರಾಗಿ ಗಿರಿಗುಹೆಗಳಲ್ಲಿ ವಾಸ ಮಾಡುವ ಸ್ವಭಾವವುಳ್ಳವರಾಗಿದ್ದರು. ಈ ಮಹಾನುಭಾವರು ಜ್ಞಾನವೃದ್ಧರೂ ತಪೋವೃದ್ಧರೂ ಆಗಿದ್ದರು. ಇವರು ಚಿಕ್ಕ ವಯಸ್ಸಿನಲ್ಲೇ ಧರ್ಮಪೀಠವನ್ನೇರಿ ಧರ್ಮೋಪದೇಶವನ್ನು ಮಾಡುತ್ತ ಬಂದರು. ಅಂದಿನಿಂದ ಇದುವರೆಗೆ ಪಂಚಧರ್ಮಪೀಠಗಳಿಗೂ ವೀರಶೈವಸಮಾಜಕ್ಕೂ ಇದ್ದ ಜನ್ಯಜನಕಭಾವಸಂಬಂಧವೆಂಬ ಅಮೃತಬೀಜವು ಅಖಿಲ ವೀರಶೈವ ಹೃದಯಕ್ಷೇತ್ರದಲ್ಲಿ ಅಂಕುರಿಸಿ ಮೆಲ್ಲಮೆಲ್ಲನೆ ಪಲ್ಲವಿಸಿ ಕುಸುಮಿತವಾಗಿ ಫಲಪ್ರದವಾಗಿ "ಸದ್ಧರ್ಮಸಿಂಹಾಸನ"

ಎಂಬ ಈ ಪೀಠದ ಹೆಸರು ಧರ್ಮಮೂರ್ತಿಯಾದ ಈ ಗುರುಕುಲಚಕ್ರ ವರ್ತಿಯ ಸಮಾಗಮದಿಂದ ಅನ್ವರ್ಥಕವಾಗಿ ಪರಿಣಮಿಸಿತು.

## ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯ ನವರತ್ನಮಾಲಿಕಾ

ಜಗದೊಳ್ಜಾಹ್ನವಿಯಂತೆ ಪೂತವೆನಿಸಿರ್ಪಾ ಸದ್ವಟಕ್ಷೇತ್ರದೋಳ್ ।
ಜಗಮಂಪಾವನಗೆಯ್ದ ದಾರುಕಮಹಾಪೀಠಾಧಿಪತ್ಯಂಗಡಾ ॥
ಸೊಗದೋಳ್ತಾಳ್ದು ಮಹತ್ವದಿಂ ತಪಸಿನಿಂಲೋಕಂಮುದಂಗೈವವೊಲ್ ।
ನೆಗಳ್ದಾಚಾರ್ಯನೆ ಪಾಲಿಸೆನ್ನನನಿಶಂ ಶ್ರೀಸಿದ್ಧಲಿಂಗೇಶ್ವರಾ ॥೧॥

ಪೆರೆಗಂಡಂಬುಧಿಯಂತೆಪೆರ್ಚುವ ಭವದ್ಭಕ್ತರ್ಕಳೇ ಧನ್ಯರೈ ।
ವರವೇದಾಗಮಸಾರಮಂಗ್ರಹಿಸಿ ನಿತ್ಯಂ ಬೋಧಿಪೈಧರ್ಮಮಂ ॥
ಪಿರಿದಾಯಾಸವಗೈವ ಕಷ್ಟತಮಮಂವೀಕ್ಷೇಂದುವಿಂನೀಗುವೈ ।
ಸರಿಯಾರ್ಪೇಳ್ಧರೆಯೊಳ್ಮಹಾಗುರುವರಾ ಶ್ರೀಸಿದ್ಧಲಿಂಗೇಶ್ವರಾ ॥೨॥

ಮನದಿಂಶಂಕರಚಿಂತನಂ ವಚನದಿಂ ಪಂಚಾಕ್ಷರಾಹ್ವಾನಮುಂ ।
ತನುವಿಂದೀಶ್ವರಪೂಜೆಯುಂ ಪ್ರತಿದಿನಂ ನಿನ್ನೊಳ್ಪೊಗರ್ಪೊತ್ತವೈ ॥
ಜನಗಳ್ನಿನ್ನಮಹತ್ವಮಂ ಸರಸದಿಂ ಕೊಂಡಾಡುವರ್ಸಂತತಂ ।
ಘನಸಂಸಾರಸಮುದ್ರನಾವೆಯೆನುತಂ ಶ್ರೀಸಿದ್ಧಲಿಂಗೇಶ್ವರಾ ॥೩॥

ಶ್ರೀಮದ್ದೇಶಿಕಪುಂಗವಂ ಭವಹರಂ ಕಾಮಾದಿವಿಧ್ವಂಸಕಂ ।
ಸೀಮಾತೀತತಪಃಪ್ರಭಾವವಿಶದಂ ಗೌರೀಶಪ್ರೀತ್ಯಾಸ್ಪದಂ ॥
ಸೋಮಾರಾಧನತತ್ಪರಂ ಗುರುವರಂ ಮೋಹಾಂಧಸೂರ್ಯಪ್ರಭಂ ।
ಪ್ರೇಮಾಗಾರಸುಭಕ್ತಕಲ್ಪತರು ನೀಂ ಶ್ರೀ ಸಿದ್ಧಲಿಂಗೇಶ್ವರಾ ॥೪॥

ಶಿವಮತವಾರ್ಧಿವರ್ಧನಶಶಾಂಕನನೂನಗುಣೈಕಧಾಮನೇ ।
ಪ್ರವಿಮಲಮೂರ್ತಿ ವಿಶ್ವಘನಕೀರ್ತಿ ಸದಾಶಿವನರ್ತಿಪಾತ್ರನೇ ॥
ಶಿವನೊಲವೆತ್ತುಯೋಗಿಜನಮಾನಸಮಾನಸ ರಾಜಹಂಸನೇ ।
ಭವನದಭಾಗ್ಯನೇ ನುತಿಪೆನಂದದೊಳುಜ್ಜಯಿನೀ ನಿವಾಸನೇ ॥೫॥

ಹೃತಮದನವಿಲಾಸಂ ಮುಕ್ತಿಮಾರ್ಗಪ್ರಕಾಶಂ ।
ಯತಿತತಿನುತಕಾಯಂ ವೇದವಿದ್ಯಾದಿಗೇಯಂ ॥
ನತಜನಪರಿಪಾಲಂ ಸರ್ವದಾಯೋಗಲೋಲಂ ।
ನುತಿಸುವೆ ಸುಖದಾತಂ ಶೈವಸಾಮ್ರಾಜ್ಯನಾಥಂ ॥೬॥

ಕಾಮಿತಫಲವೀಯುವ ಚಿಂ ।
ತಾಮಣಿ ನೀನೆಂದು ನಂಬಿ ಭಜಿಪರಿಗನಿಶಂ ॥
ಪ್ರೇಮದಿ ಮಂಗಳವೀಯುವೆ ।
ನೇಮದಿ ನುತಿಪರ್ಗೆದಾವುದಿಳೆಯೊಳಸಾಧ್ಯಂ ॥೭॥

ಚಾತುರ್ವರ್ಣಾಶ್ರಮಗಳ ।
ರೀತಿಯನರಿದೈಕ್ಯಗೊಂಡು ವರ್ತಿಪತೆರನಂ ॥
ಪ್ರೀತಿಮಿಗೆಹರಿಸಿ ಮತಮಂ ।
ಭೂತಳದೊಳ್ಪೆರ್ಚುಗೊಳಿಸಿ ಮೆರೆದೈ ಗುರುವೇ. ॥೮॥

ಜಯಸಿದ್ಧಲಿಂಗದೇವನೆ ।
ಜಯಶಂಕರನಣುಗನಾದಿದಾರುಕಮಹಿಮಾ ॥
ಜಯಗುಣಮಣಿರತ್ನಾಕರ ।
ಜಯಜಗದಾಚಾರ್ಯ ಸಿದ್ಧಸರಸಿಜಸೂರಾ ॥೯॥

ಪಾದಸೇವಕ.

ಎಸ್. ಎಂ. ಬಸವಯ್ಯ.

## ಶ್ರೀ ಜಗದ್ಗುರು ಸಿದ್ಧಲಿಂಗಪಂಚಕಂ

ನಂದಿಗೋತ್ರನಾಯಕಂ ನರೇಂದ್ರಸೌಖ್ಯದಾಯಕಂ ।
ವೃಷ್ಟಿಸೂತ್ರಬೋಧಕಂ ಜನೇಷ್ಟಪೂರ್ತಿಕಾರಕಂ ॥
ಯೋಗಿಪೂಗಪಾಲಕಂ ಸುಯೋಗತತ್ವಧಾರಕಂ ।
ಸಿದ್ಧಲಿಂಗನಾಮಕಂ ಜಗದ್ಗುರುಂ ಭಜೇ ಸದಾ ॥೧॥

ಸಿದ್ಧಸಂಘಪೋಷಕಂ ಸುಸಿದ್ಧಿಸಂಘಭಾಸಕಂ ।
ಬೌದ್ಧತತ್ವಭಂಜಕಂ ವಿಶುದ್ಧತತ್ವರಂಜಕಂ ॥
ಸಿದ್ಧನಾಥಪೂಜಕಂ ನಿಬದ್ಧಲೋಕಪಾಲಕಂ ।
ಸಿದ್ಧಲಿಂಗನಾಮಕಂ ಜಗದ್ಗುರುಂ ಭಜೇ ಸದಾ ॥೨॥

ಅಕ್ಷಮಾಲಿಕಾಂಕನಂ ಜಿತಾಕ್ಷಮರ್ತಿಹಾರಿಣಂ ।
ಅಕ್ಷಯಾಧ್ವಗಾಮಿನಂ ವಿಪಕ್ಷಮಾನಹಾರಿಣಂ ॥
ಮೋಕ್ಷಮಾರ್ಗದರ್ಶಿನಂ ಮಹೋಕ್ಷವಾಹರೂಪಿಣಂ ।
ಸಿದ್ಧಲಿಂಗನಾಮಕಂ ಜಗದ್ಗುರುಂ ಭಜೇ ಸದಾ ॥೩॥

ಪಾಪಲೋಪಕಾರಿಣಂ ತಪಃಪ್ರಭಾಪ್ರಕಾಶಿನಂ ।
ರೂಪಲೋಪಹಾರಿಣಂ ತ್ರಿತಾಪಮೂಲಶೋಷಿಣಂ ॥
ಶಾಪಯುಕ್ತಭಾಷಣಂ ಶಿವಾಪತಿಪ್ರಮೋದಿನಂ ।
ಸಿದ್ಧಲಿಂಗನಾಮಕಂ ಜಗದ್ಗುರುಂ ಭಜೇ ಸದಾ ॥೪॥

ಭಕ್ತಭಕ್ತಿನಂದಿತಂ ವಿರಕ್ತವೃಂದವಂದಿತಂ ।
ಮುಕ್ತಿತತ್ವಪೂರಿತಂ ಸಶಕ್ತಿತತ್ವಶೋಭಿತಂ ॥
ಮುಕ್ತಸಂಘಮಂಡಿತಂ ವಿರಕ್ತಿಭಾಗ್ಯಭೂಷಿತಂ ।
ಸಿದ್ಧಲಿಂಗನಾಮಕಂ ಜಗದ್ಗುರುಂ ಭಜೇ ಸದಾ ॥೫॥

ಬೃಹನ್ಮಠಾಧ್ಯಕ್ಷ ಹೋಟಗಿ.

## ಶ್ರೀಮದುಜ್ಜಯಿನೀ ಸದ್ಧರ್ಮ ಸಿಂಹಾಸನಾಧೀಶ್ವರ
## ಶ್ರೀಮಜ್ಜಗದ್ಗುರು ಸಿದ್ಧಲಿಂಗರಾಜದೇಶಿಕೇಂದ್ರ
## ಚರಪಟ್ಟಾಧ್ಯಕ್ಷ ಮಹಾಸ್ವಾಮಿನಾಂ
## ಸಂಕ್ಷಿಪ್ತಚರಿತಂ

---

ಪಂಚಾಕ್ಷರ ಮಹಾಮಂತ್ರ ದಿವ್ಯರತ್ನವಿಭೂಷಿತಃ ।
ಶಿವಭಕ್ತಿಸುಧಾಂಭೋಧಿಃ ಪ್ರಸಾದೈಕಮತಿಸ್ಸದಾ ॥೧॥

ತಿಪ್ಪೇರುದ್ರಕಲಾದಾತಾ ಶೈವಶಾಸ್ತ್ರವಿಶಾರದಃ ।
ಜ್ಞಾನವೃದ್ಧೋ ವಯೋವೃದ್ಧಸ್ತೇಜಸ್ವೀಚ ದಯಾನಿಧಿಃ ॥೨॥

ಗೃಹಮೇಧೀ ಸತಾಂಮಾನ್ಯ ಶ್ರೀಚನ್ನವೃಷಭಾಭಿಧಃ ।
ಚುಕ್ಕಾನಳ್ಳೀಮಠಾಧೀಶೋ ರಾಜತೇ ಯೋಗಿನಾಂವರಃ ॥೩॥

ತತ್ಪತ್ನೀ ಗುರುಸಿದ್ಧಾಂಬಾ ಪಾತಿವ್ರತ್ಯ ಗುಣಾನ್ವಿತಾ ।
ಶಿವಭಕ್ತಿರಸಾಸ್ವಾದಾ ರಾಜತೇ ಗಿರಿಜಾಸಮಾ ॥೪॥

ಕೃತಶಿವಪರಿಚರ್ಯಾ ಸತ್ಯಸೌಶೀಲ್ಯವರ್ಯಾ ।
ಪ್ರಶಮಿತಭವಕಾರ್ಯಾ ತಾಪಸಸ್ತೋಮವಂದ್ಯಾ ॥
ವರಗುಣಗಣಮಾಲ್ಯಾ ಶ್ರೀಭವಾನೀಕೃಪಾಢ್ಯಾ ।
ಜಯತಿಚ ಪತಿಭಕ್ತ್ಯಾಶಾಂತಿ ಗಾಂಭೀರ್ಯಸೀಮಾ ॥೫॥

ಸಾಪುತ್ರವಾಂಛಯಾ ಸಾಧ್ವೀ ತಪಶ್ಚಕ್ರೇ ಸುದುಷ್ಕರಂ ।
ಬಹಿರ್ವ್ಯಾಪಾರ ರಹಿತಾ ಸುವ್ರತಂ ವರ್ಷಪಂಚಕಂ ॥೬॥

ಶಂಕರಸ್ತು ಕೃಪಾಸಿಂಧುಸ್ತುಷ್ಟಸ್ತೇನ ಮಹೀಯಸಾ ।
ಪುತ್ರರತ್ನಂದದೌತಸ್ಯೈ ತಪಸ್ವಿನ್ಯೈ ಮಹೋದಯಂ ॥೭॥

ಹಿಮಕರಧರರೂಪ ಸ್ಸರ್ವಭಕ್ತ್ಯೋಪದೇಷ್ಟಾ ।
ನುತಜನ ಸುರಭೂಜೋ ದುರ್ಮತಧ್ವಾಂತಭಾನುಃ ॥
ಪ್ರಥಿತಮರುಳಸಿದ್ಧಃ ಪ್ರಾದುರಾಸೀ ತ್ಪೃಥಿವ್ಯಾ ।
ಮಿತಿ ಜನನುತಿಪಾತ್ರಂ ದಿವ್ಯತೇಜಾಸ್ಸುತೋಽಯಂ ॥೮॥

ಶಿವಯೋಗಸುಖಾವಾಪ್ತಿ ಪರಿಪೂರ್ಣಂ ತಪೋಧನಂ ।
ಯಮಾನೀಯ ಮಹಾತ್ಮಾನಂ ಪುರೀಮುಜ್ಜಯಿನೀಂತದಾ ॥೯॥

ತತ್ರಸದ್ಧರ್ಮಪೀಠಸ್ಯಪ್ರಭುಂಚಕ್ರುರ್ಮಹಾಜನಾಃ ।
ಪರಾಭವಾಬ್ಧ ವೈಶಾಖ ಕೃಷ್ಣಪಕ್ಷೇಽಹ್ನಿ ಪಂಚಮೇ ॥೧೦॥

ವೀರಶೈವಮತಾಚಾರ್ಯಂ ಸಿದ್ಧಲಿಂಗ ಜಗದ್ಗುರುಂ ।
ತಂವಂದೇಚರವರ್ಯಂಚ ಪಂಡಿತೌಘಸುರದ್ರುಮಂ ॥೧೧॥

ಆಸ್ಥಾನವಿದ್ವಾನ್ ಪಂಡಿತ ಶಂಕರಶಾಸ್ತ್ರಿಕೃತಂ



# ಶ್ರೀಮದುಜ್ಜಯಿನೀ ಸದ್ಧರ್ಮಸಿಂಹಾಸನ ಜಗದ್ಗುರು ಪಟ್ಟಾಭಿಷೇಕಮಹೋತ್ಸವ

ಬಳ್ಳಾರಿ ಡಿ|| ಕೂಡ್ಲಿಗಿ ತಾ|| ಉಜ್ಜಯಿನೀ ಕ್ಷೇತ್ರದಲ್ಲಿ ವಿರಾಜಿಸುತ್ತಿರುವ ವೀರಶೈವಮತಸ್ಥಾಪನಾಚಾರ್ಯ ಶ್ರೀ ಜಗದ್ಗುರು ದಾರುಕಾಚಾರ್ಯಧರ್ಮಪೀಠದ ಪಟ್ಟಾಭಿಷೇಕಮಹೋತ್ಸವವು ಯುವನಾಮ ಸಂವತ್ಸರ ಮಾಘ ಶು|| ೧೦ ರವಿವಾರ (ತಾ|| ೨-೨-೧೯೩೬) ದಿವಸ ಪ್ರಾತಃಕಾಲ ೯-೨೦ ಘಂಟೆಯ ಮೇಲೆ ೯-೪೫ ಘಂಟೆಯೊಳಗೆ ಸಲ್ಲುವ ಮೀನಲಗ್ನಶುಭಾಂಶದಲ್ಲಿ ಶ್ರೀ ಜಗದ್ಗುರು ಸಿದ್ಧೇಶ್ವರಶಿವಾಚಾರ್ಯಮಹಾಸ್ವಾಮಿಗಳವರಿಗೆ ಶ್ರೀಮದ್ರಂಭಾಪುರೀ ವೀರಸಿಂಹಾಸನಾಧೀಶ್ವರ ಶ್ರೀ ಜಗದ್ಗುರು ಶಿವಾನಂದರಾಜೇಂದ್ರಶಿವಾಚಾರ್ಯ ಮಹಾಸ್ವಾಮಿಗಳವರಿಂದ ಅತ್ಯಂತ ವೈಭವದೊಡನೆ ನೆರವೇರಿತು. ಈ ಮಹೋತ್ಸವಕ್ಕೆ ಭರತಖಂಡದ ನಾನಾಭಾಗಗಳಿಂದ ೨೫ ಸಾವಿರಕ್ಕೆ ಮೇಲ್ಪಟ್ಟು ಭಕ್ತಮಂಡಳಿಯವರು ಸಮ್ಮಿಲಿತರಾಗಿದ್ದರು. ಪಟ್ಟಾಭಿಷೇಕಕಾರ್ಯವು ' ನಭೂತೋ ನಭವಿಷ್ಯತಿ ' ಎನ್ನುವಂತೆ ನೆರವೇರಿತು. ಈ ಪೀಠಕ್ಕೆ ಪಟ್ಟಾಧಿಕಾರವು ಈ ತರಹದ ವೈಭವದೊಡನೆ ಯಾವ ಕಾಲದಲ್ಲಿಯೂ ನೆರವೇರಿಲ್ಲವೆಂದು ಭಕ್ತಮಂಡಲಿಯು ಮಾತುಮಾತಿಗೂ ಆನಂದೋದ್ಗಾರವನ್ನು ಪ್ರಕಟಿಸುತ್ತಿತ್ತು. ಈ ಮಹಾಕಾರ್ಯವನ್ನು ಉಜ್ಜಯಿನೀ-ಕೊಟ್ಟೂರು-ಬಳ್ಳಾರಿ ಇತ್ಯಾದಿ ಗ್ರಾಮಗಳ ದೈವದವರು ಅತ್ಯಂತೋತ್ಸಾಹದಿಂದ ನೆರವೇರಿಸಿದರು. ಈ ಪಟ್ಟಾಭಿಷೇಕ ಕಾರ್ಯವನ್ನು ಶ್ರೀಮದ್ರಂಭಾಪುರೀ ಜಗದ್ಗುರುಗಳವರ ನೇತೃತ್ವದಲ್ಲಿ ನಾಗನೂರು ಬೃಹನ್ಮಠಾಧ್ಯಕ್ಷರಾದ ವೇ|| ಪಂಡಿತ ಕಾಶೀನಾಥಶಾಸ್ತ್ರಿಗಳವರು ಬಹುದಕ್ಷತೆಯಿಂದ ಪೂರೈಸಿದರು. ಈ ಮಂಗಲಕಾರ್ಯಕ್ಕಾಗಿ ಶ್ರೀ

ಕೇದಾರ ಜಗದ್ಗುರುಗಳವರು ಆಗಮಿಸಿದ್ದರು. ನೂತನ ಜಗದ್ಗುರುಗಳವರು ಶಿವೈಕ್ಯರಾದ ಶ್ರೀಜಗದ್ಗುರು ಸಿಧ್ಧಲಿಂಗಶಿವಾಚಾರ್ಯ ಮಹಾಸ್ವಾಮಿಗಳವರ ಸಾಕ್ಷಾತ್ ಪ್ರತಿಬಿಂಬದಂತಿದ್ದು ಅವರಂತೆ ಜ್ಞಾನ ವೈರಾಗ್ಯಾದಿ ಸಮಸ್ತ ಜಗದ್ಗುರು ಲಕ್ಷಣಲಕ್ಷಿತರಾಗಿರುವುದರಿಂದ ಪುನಃ ಶ್ರೀಜಗದ್ಗುರು ಸಿದ್ಧಲಿಂಗಶಿವಾಚಾರ್ಯರು ಶ್ರೀಜಗದ್ಗುರು ಸಿದ್ಧೇಶ್ವರ ಶಿವಾಚಾರ್ಯರೆಂಬ ಪುಣ್ಯಾಭಿಧಾನದಿಂದ ಅವತರಿಸಿದರೆಂಬ ಆನಂದೋದ್ಗಾರವನ್ನು ಪ್ರತಿಯೊಬ್ಬರೂ ತೆಗೆಯುತ್ತಿದ್ದರು. ಈ ಮಹೋತ್ಸವಕ್ಕೆ ಜಗದ್ವಿಖ್ಯಾತರಾದ ದಿವಾನ್ ಬಹದ್ದೂರ್ ರಾಜಮಂತ್ರ ಪ್ರವೀಣ ಮೈಸೂರು ಹೈಕೋರ್ಟಿನ ರಿ|| ಚೀಫ್‌ಜಸ್ಟೀಸ್ ಶ್ರೀ ಪಿ. ಮಹಾದೇವಯ್ಯನವರು ಆಗಮಿಸಿದ್ದರು. ಅಲ್ಲದೆ ಬಳ್ಳಾರಿ ಡಿ|| ಕೂಡ್ಲಿಗಿ ತಾಲ್ಲೂಕಿನ ಸಬ್ ಮ್ಯಾಜಿಸ್ಟ್ರೇಟ್ ಡಿ. ಶ್ರೀನಿವಾಸರಾವ್, ಕೂಡ್ಲಿಗಿ ತಹಶೀಲದಾರ ಟಿ. ಶ್ರೀನಿವಾಸಾಚಾರ್ಯ, ಕೂಡ್ಲಿಗಿ ಸರ್ಕಲ್ ಇನ್‌ಸ್ಪೆಕ್ಟರ್ ಸಿ. ರಾಮಾನುಜಾಚಾರ್ಲು, ಕೊಟ್ಟೂರು ಸಬ್ ಇನ್‌ಸ್ಪೆಕ್ಟರ್ ಐ. ದತ್ತಾತ್ರಯಲು ನಾಯಡು, ಹರಪನಹಳ್ಳಿ ಬಿ. ಜೋಗಪ್ಪ, ಎಂ. ಎ., ಹುವ್ವಿನಹಡಗಲಿ ಸಬ್ ರಜಿಸ್ಟ್ರಾರ್ ಎಂ. ಕೆ. ನಾಗಪ್ಪ, ಬಿ. ಎ., ಹರಪನಹಳ್ಳಿ ಸಬ್ ರಿಜಿಸ್ಟ್ರಾರ್ ಎಂ. ಕರವೀರಪ್ಪ, ಬಿ. ಎ., ಇತ್ಯಾದಿ ಸರಕಾರಿ ಅಧಿಕಾರಿಗಳು ಆಗಮಿಸಿದ್ದರು. ಮತ್ತು ಪಿ. ಐ. ಹಿರೇಮಠ ಹೈಕೋರ್ಟ ವಕೀಲ ಹುಬ್ಬಳ್ಳಿ, ಜಿ. ಸಿ. ಹಿರೇಮಠ, ಬಿ.ಎ., ಎಲ್. ಎಲ್. ಬಿ., ಹೈಕೋರ್ಟು ವಕೀಲ ಹುಬ್ಬಳ್ಳಿ, ಇಮಾಮ ಸಾಹೇಬ, ಬಿ. ಎ., ಬಿ. ಎಲ್., ಜಗಲೂರು ಇತ್ಯಾದಿ ಪ್ರತಿಷ್ಠಿತ ವಕೀಲರು ಆಗಮಿಸಿದ್ದರು. ಈ ಮಂಗಲಕಾರ್ಯವು ವೈಭವದೊಡನೆ ನೆರವೇರಲೆಂದು ಶ್ರೀ ಕಾಶೀಜಗದ್ಗುರುಗಳು, ಶ್ರೀಶೈಲಜಗದ್ಗುರುಗಳು, ಮೆ|| ಬಳ್ಳಾರಿ ಡಿ|| ಮ್ಯಾಜಿಸ್ಟ್ರೇಟ್ ಸಾಹೇಬ್ ಬಹದ್ದೂರರವರು ರಾಜಸಭಾಭೂಷಣ ದಿವಾನ್‌ಬಹದ್ದೂರ್ ಸರ್. ಕೆ. ಪಿ. ಪುಟ್ಟಣ್ಣ



ಶ್ರೀಜಗದ್ಗುರು ಶಿವಾನಂದರಾಜೇಂದ್ರ ಶಿವಾಚಾರ್ಯ
ಮಹಾಸ್ವಾಮಿಗಳು



ಶ್ರೀಜಗದ್ಗುರು ಸಿದ್ಧೇಶ್ವರಶಿವಾಚಾರ್ಯ
ಮಹಾಸ್ವಾಮಿಗಳು



ಶ್ರೀ ಜ. ಸಿದ್ಧಲಿಂಗಶಿವಾಚಾರ್ಯಮಹಾಸ್ವಾಮಿಗಳು ಬುಕ್ಕಾಂಬುಧಿಗಿರಿಯಲ್ಲಿ ತಪಸ್ಸನ್ನಾಚರಿಸುತ್ತಿರುವುದು.

ಶೆಟ್ಟರು, ಧಾರವಾಡ ಡಿ|| ಬೋರ್ಡ್ ಪ್ರೆಸಿಡೆಂಟ್ ರಾವಬಹದ್ದೂರ್, ಬಿ. ಎಲ್. ಪಾಟೀಲರು, ವೇದತೀರ್ಥಾದ್ಯನೇಕ ಪದವೀಪ್ರತಿಷ್ಠಿತ ಯಾದಗಿರಿ ಸಂಸ್ಕೃತ ಕಾಲೇಜ ಪ್ರಿನ್ಸಿಪಾಲ್ ಚಿವರೆಮಠದ ವೇ|| ಪಂಡಿತ ಶ್ರೀ ವೀರಭದ್ರಶಾಸ್ತ್ರಿಗಳು ಇವರೇ ಮೊದಲಾದವರು ತಂತಿ ಗಳನ್ನೂ ಪತ್ರಗಳನ್ನೂ ಕಳುಹಿಸಿದ್ದರು.

ಈ ಮಹಾಕಾರ್ಯಕ್ಕೆ ಹಸಗೋಡು, ಹೋಟಗಿ, ಬಾರ್ಶಿ, ಸೂಡಿ, ಯಲಬುರ್ಗಿ, ದಿಗ್ಗಾವಿ, ಜೈನಾಪುರ, ಕಂಪಲಿ, ಹಾವೇರಿ, ಹಿರೇಹಾಳ, ಜಮಖಂಡಿ, ಬಿಲಕೇರಿ, ಮಂಡಲಗೇರಿ, ಪಾಲ್ತೂರು, ಬೂದಗುಂಪಿ, ಹೊಳಲಗುಂದಿ, ಹರಪನಹಳ್ಳಿ, ಬೆಂಗಳೂರು, ಚೋರ ನೂರು, ಹೊಳಗುಂದಿ, ಸೊಲ್ಲಾಪುರ, ತೌಡೂರು, ಬಾಗಳಿ, ಕುಡತಿನಿ, ಕನಕಗಿರಿ, ಮಸಗಿ, ಬ್ಯಾಹಟ್ಟಿ, ತೆಕ್ಕಲಕೋಟೆ, ಕಾಮನಹಾಳ, ಆಲೂರು ಇತ್ಯಾದಿ ಗ್ರಾಮಗಳ ಪಟ್ಟಚರಾಧಿಕಾರಿಗಳು ಆಗಮಿಸಿದ್ದರು. ಪಟ್ಟಾಭಿಷೇಕಕಾರ್ಯವು ಪೂರ್ತಿಯಾದಮೇಲೆ ರಂಭಾಪುರೀ, ಉಜ್ಜ ಯಿನೀ, ಕೇದಾರಜಗದ್ಗುರುಗಳವರ ಅಧ್ಯಕ್ಷತೆಯಲ್ಲಿ ಮಹಾಸಭೆಯು ನೆರವೇರಿತು. ಸಭೆಯಲ್ಲಿ ಜನಸ್ತೋಮವು ಸಮುದ್ರದಂತೆ ತೋರುತ್ತಿ ದ್ದಿತು. ಧರ್ಮಪೀಠಪದ್ಧತಿಗನುಸಾರವಾಗಿ ರಂಭಾಪುರೀ ಮತ್ತು ಕೇದಾರ ಜಗದ್ಗುರುಗಳವರು ಮಹಾಬೆಲೆಯುಳ್ಳ ವಸ್ತ್ರಾಭರಣಾದಿ ಗಳನ್ನು ಸಮರ್ಪಿಸಿದರು. ಅಲ್ಲದೆ ಕಾಶೀ ಮತ್ತು ಶ್ರೀಶೈಲ ಪೀಠ ಗಳಿಂದ ಬಂದಿದ್ದ ನೂತನ ಭವ್ಯವಸ್ತ್ರಾಭರಣಗಳು ಸಮರ್ಪಿಸಲ್ಪಟ್ಟವು. ರಂಭಾಪುರೀಜಗದ್ಗುರುಗಳವರು ಒಂದುಸಾವಿರ ರೂಪಾಯಿ ಬೆಲೆ ಬಾಳುವ ೨ ದಿವ್ಯಾಶ್ವಗಳನ್ನು ಸಮರ್ಪಿಸಿದರು. ಕೊಟ್ಟೂರು ವಿ|| ಮ|| ಜಾಗಟಗೇರಿ ಸಣ್ಣವೀರಪ್ಪಯ್ಯನವರು ಅಸಾಧಾರಣ ಭಕ್ತಿವಿಶೇಷ ದಿಂದ ಭವ್ಯಕಿರೀಟವನ್ನು ಸಮರ್ಪಿಸಿದರು. ಸಮರ್ಪಣಕಾರ್ಯವು ನೆರ ವೇರಿದ ಮೇಲೆ ಶ್ರೀಮದ್ರಂಭಾಪುರೀ ಜಗದ್ಗುರುಗಳವರು ಕಂಠೀರವ

ಸದೃಶಕಂಠಧ್ವನಿಯಿಂದ ನೂತನ ಜಗದ್ಗುರುಗಳವರ ವಿಷಯವನ್ನೂ, ಉಜ್ಜಯಿನೀಪೀಠದ ಮಹತ್ತ್ವವನ್ನೂ, ಭಕ್ತಜನರು ತೋರಿಸುತ್ತಿರುವ ಭಕ್ತಿವೈಭವವನ್ನೂ ಬಣ್ಣಿಸಿದರು. ಬಳಿಕ ಉಜ್ಜಯಿನೀಪೀಠದ ನೂತನ ಜಗದ್ಗುರುಗಳವರು ಉಜ್ಜಯಿನೀಪೀಠದ ಜೀರ್ಣೋದ್ಧಾರವಿಷಯದಲ್ಲಿ ತಮ್ಮ ಮಂಜುಲಧ್ವನಿಯಿಂದ ಧೀರೋದಾತ್ತವಾದ ಭಾಷಣವನ್ನು ಮಾಡಿದರು. ಶ್ರೀಗಳವರ ಭಾವಗರ್ಭಿತವಾದ ಭಾಷಣವನ್ನು ಕೇಳಿದ ಜನಸ್ತೋಮದ ಸಂತೋಷಕ್ಕೆ ಪಾರವೇ ಇಲ್ಲದಂತಾಗಿತ್ತು. ನೂತನ ಜಗದ್ಗುರುಗಳವರ ಮುಖಕಮಲದಿಂದ ಹೊರಸೂಸುತ್ತಿರುವ ಬ್ರಹ್ಮತೇಜಸ್ಸನ್ನು ಕಂಡು ಕ್ಷಣಕ್ಷಣಕ್ಕೂ ಜನಸ್ತೋಮವು ಜಯಜಯಕಾರರೂಪದಿಂದ ತಮ್ಮ ಆನಂದವನ್ನು ವ್ಯಕ್ತಪಡಿಸುತ್ತಿತ್ತು. ಈ ಗುರುಮೂರ್ತಿಯು ಸಾಕ್ಷಾತ್ ಸಿದ್ಧಲಿಂಗೇಶನ ಪ್ರತಿಬಿಂಬವೆಂದೂ, ಅಭಿನವದಾರುಕನೆಂದೂ ಸರ್ವರೂ ಉದ್ಘೋಷಿಸುತ್ತಿದ್ದರು. ಅಷ್ಟಕ್ಕೆ ಸಮಯವು ವಿಶೇಷವಾದುದರಿಂದ ಸಭಾಕಾರ್ಯವು ವಿರಮಿಸಲ್ಪಟ್ಟಿತು. ಅದೇ ದಿವಸ ಸಾಯಂಕಾಲ ನೂತನ ಜಗದ್ಗುರುಗಳವರ ಆಂದೋಲಿಕೋತ್ಸವವು ಸಮುದ್ರದಂತಿದ್ದ ಜನಸ್ತೋಮದಲ್ಲಿ, ಚತುರಂಗಬಲದೊಡನೆ ಅಸಾಧಾರಣವಾದ ವೈಭವದಿಂದ ನೆರವೇರಿತು. ಈ ಮಹೋತ್ಸವದಲ್ಲಿ ನ್ಯಾಮತಿ, ಹಿರೇಹಡಗಲಿ, ಕೊಟ್ಟೂರು, ಉಜ್ಜಯಿನಿ, ಬಿಳಿಚೋಡು, ಹೊಳಗುಂದಿ ಇತ್ಯಾದ್ಯನಂತಾನಂತ ಗ್ರಾಮಗಳ ಭಜನಾಸಂಘದವರು ಆಗಮಿಸಿ, ತಮ್ಮ ಮಂಜುಳಸ್ತೋತ್ರಗಳಿಂದ ಮಹೋತ್ಸವಕ್ಕೆ ವಿಶೇಷ ವೈಭವವನ್ನುಂಟುಮಾಡಿದ್ದರು. ಶ್ರೀಜಗದ್ಗುರು ಪಂಚಾಚಾರ್ಯರ ಜಯಘೋಷವು ಭೂವ್ಯೋಮ್ಯಾಕಾಶಗಳನ್ನುವ್ಯಾಪಿಸಿತ್ತು. ಸಕಲವಿಧ ವಾದ್ಯಗಳೂ ಭೋರ್ಗರೆಯುತ್ತಿದ್ದವು. ಈ ರೀತಿಯಾಗಿ ಉತ್ಸವವು ಅಸಾಧಾರಣ ವೈಭವದಿಂದ ನೆರವೇರಿ, ರಾತ್ರಿ ೭ ಘಂಟೆಗೆ ಸಂಸ್ಥಾನಮಠಕ್ಕೆ ಬಂದು ತಲುಪಿತು. ಬಳಿಕ ಸಭೆಯು ಸೇರಿತು. ಬೆಂಗಳೂರು ಮಹಾಂತಿನ

ಮಠಾಧ್ಯಕ್ಷ ಶ್ರೀ ಗಂಗಾಧರಶಿವಾಚಾರ್ಯರವರು ಮಠಾಚಾರ್ಯರ ವಿಷಯ ದಲ್ಲಿಯೂ ಧಾರ್ಮಿಕವಿಷಯದಲ್ಲಿಯೂ .ಉತ್ಸಾಹಪೂರಿತವಾದ ಭಾಷ ಣವನ್ನು ಮಾಡಿದರು. ವೇ|| ಶಿರೋಳ ಬೃಹನ್ಮಠದ ಪಂಚಾಕ್ಷರ ಶಾಸ್ತ್ರಿಗಳು ಧರ್ಮಜಾಗೃತಿಯ ಬಗ್ಗೆ ಉತ್ಸಾಹಯುಕ್ತವಾದ ಭಾಷಣ ವನ್ನು ಮಾಡಿದರು. ಆಮೇಲೆ ವೇ|| ಪಂಡಿತ ಶ್ರೀ ಕಾಶೀನಾಥಶಾಸ್ತ್ರಿ ಗಳವರು ಈಗಿರುವ ಪೀಠದ ಸ್ಥಿತಿಯನ್ನು ಬಣ್ಣಿಸಿ ಇಲ್ಲಿ ನೆರೆದಿರುವ ಭಕ್ತಾದಿಗಳು ತಮ್ಮ ಶಕ್ತಿಮೀರಿ ಕಾಣಿಕಾದಿಗಳನ್ನು ಸಮರ್ಪಿಸ ಬೇಕೆಂದು ಮನಕರಗುವಂತೆ ಭಾಷಣಮಾಡಿದರು. ೧ ತಾಸಿನಲ್ಲಿ ಹತ್ತುಸಾವಿರ ರೂಪಾಯಿಗಳ ಕಾಣಿಕೆಯಾಯಿತು. ಇದು ಶ್ರೀಪೀಠದ ಜೀರ್ಣೋದ್ಧಾರಕ್ಕೆ ಮುಖ್ಯ ಸಾಧನವಾಯಿತೆಂದು ಅತ್ಯಾನಂದದಿಂದ ಉದ್ಘೋಷಿಸಬೇಕಾಗಿದೆ. ಕಾಣಿಕಾ ಸಮರ್ಪಣ ಕಾರ್ಯವಾದಮೇಲೆ ಮೈಸೂರು ಹೈಕೋರ್ಟಿನ ರಿ|| ಚೀಫ್ ಜಸ್ಟಿಸ್ ಪಿ. ಮಹಾದೇವಯ್ಯ ನವರು ಶ್ರೀ ಜಗದ್ಗುರು ಪಂಚಪೀಠಗಳ ಮಹತ್ತ್ವವನ್ನೂ, ಈ ಪೀಠಗಳ ಸನಾತನತ್ವವನ್ನೂ, ಶಿವೈಕ್ಯರಾದ ಶ್ರೀ ಜಗದ್ಗುರು ಸಿದ್ಧಲಿಂಗ ಶಿವಾ ಚಾರ್ಯಮಹಾಸ್ವಾಮಿಗಳವರ ಅದ್ಭುತಸಾಮರ್ಥ್ಯವನ್ನೂ, ನೂತನ ಜಗದ್ಗುರುಗಳವರ ವಿಷಯವನ್ನೂ ಬಹುಮನೋಹರವಾಗಿ ಬಣ್ಣಿಸಿ ದರು. ಈ ಮಹೋದಯರ ಭವ್ಯವಾದ ಭಾಷಣವನ್ನು ಕೇಳಿ ಸರ್ವ ಸಭಿಕರೂ ಸಂತೋಷಸಾಗರದಲ್ಲಿ ಲೋಲಾಡಿದರು. ಅಷ್ಟಕ್ಕೆ ಸಮಯ ವಾದುದರಿಂದ ಅಂದಿನ ಸಭಾಕಾರ್ಯವು ಪೂರ್ತಿಗೊಂಡಿತು. ಬಳಿಕ ೩ ನೇ ತಾರೀಖಿನ ದಿವಸ ಸಭೆ ಸೇರಿತು. ಅಂದಿನ ಸಭೆಯಲ್ಲಿ ಸೊಲ್ಲಾ ಪುರಶಹರನಿವಾಸಿಗಳಾದ ಶ್ರೀಮತಿ ಭಾಗೀರಥೀಬಾಯಿ ಕಟಾಪ ಇವರು ಗುರುಲಿಂಗಜಂಗಮರ ವಿಷಯದಲ್ಲಿಯೂ, ಮಠಸ್ಥಾಪನಾಚಾರ್ಯರ ವಿಷಯದಲ್ಲಿಯೂ ಭಕ್ತಿರಸಭರಿತವಾದ ಭವ್ಯೋಪನ್ಯಾಸವನ್ನು ಮಾಡಿ ದರು. ಸ್ತ್ರೀಯರಲ್ಲಿ ಈ ರೀತಿಯಾಗಿ ಭಾಷಣಮೂಲಕ ಧರ್ಮಜಾಗೃತಿ

ಯನ್ನುಂಟುಮಾಡುವ ಪ್ರಿಯರು ಇಲ್ಲವೆಂದರೆ ಅತಿಶಯೋಕ್ತಿಯಾಗಲಾರದು. ಇವರ ಭಾಷಣವಾದಮೇಲೆ ಕರ್ಣಾಟಕ ಮಹಾರಾಷ್ಟ್ರ ದೇಶಗಳಲ್ಲಿ ಧರ್ಮಸುಧಾರಕರೆಂದು ಸುಪ್ರಸಿದ್ಧರಾಗಿದ್ದ ಹೋಟಗಿ ಬೃಹನ್ಮಠಾಧೀಶ ಶ್ರೀ ಚನ್ನವೀರ ಶಿವಾಚಾರ್ಯಸ್ವಾಮಿಗಳವರು ಗುರುಮಹತ್ವದ ಬಗ್ಗೆ ಬಹು ಮನೋಹರವಾದ ಭಾಷಣವನ್ನು ಮಾಡಿ ಸರ್ವಸಭಿಕರನ್ನು ಸಂತೋಷಸಮುದ್ರದಲ್ಲಿ ಮುಳುಗಿಸಿದರು. ಆಮೇಲೆ ಬಾರ್ಸಿಯ ವೀರಶೈವಗರ್ಜನಾ ಪತ್ರಿಕೆಯ ಸಂಪಾದಕರಾದ ಶ್ರೀ ಪರಾಂಡಕರ ಮಠದ ರಾಚಲಿಂಗಸ್ವಾಮಿಗಳವರು "ಗುರುವರ್ಗದವರ ಕರ್ತವ್ಯ" ಎಂಬ ವಿಷಯದಮೇಲೆ ಮರಾಠಿಭಾಷೆಯಿಂದ ಮನೋಹರವಾದ ಭಾಷಣವನ್ನು ಮಾಡಿದನಂತರ ಶ್ರೀಜಗದ್ಗುರು ಪಂಚಾಚಾರ್ಯ ಜಯಘೋಷದೊಡನೆ ವಿರಮಿಸಲ್ಪಟ್ಟಿತು.

ಇತಿ ಶ್ರೀಮದ್ವೇದವೇದಾಂತಸಿದ್ಧಾಂತಪುರಾಣಾಗಮೇತಿಹಾಸಪ್ರಸಿದ್ಧ
ಶ್ರೀಮದ್ವೀರಶೈವಮಹಾಮತಸ್ಥಾಪನಾಚಾರ್ಯ ಶ್ರೀಜಗದ್ಗುರು
ಏಕೋರಾಮಶಿವಾಚಾರ್ಯ ಪರಂಪರಾಗತ ಹಿಮವತ್ಕೇದಾರ
ಕ್ಷೇತ್ರ ವಿರಾಜಮಾನ ಉಷಾಮಠಾಧಿಷ್ಠಿತ ವೈರಾಗ್ಯ
ಸಿಂಹಾಸನಾಧೀಶ್ವರ ರಾವಲೋಪನಾಮಶ್ರೀಜಗದ್ಗುರು
ನೀಲಕಂಠಲಿಂಗಶಿವಾಚಾರ್ಯಮಹಾಚಾರ್ಯ ಕರ
ಕಂಜಾತಸಂಜಾತ ತರ್ಕವ್ಯಾಕರಣ ಸಾಂಖ್ಯ
ಯೋಗವೇದಾಂತ ಶಿವಸಿದ್ಧಾಂತತತ್ತ್ವಜ್ಞ
ಶಿವಯೋಗಿರಾಜಪಂಡಿತ ಶ್ರೀಕೈಲಾಸ
ಲಿಂಗ ಶಿವಾಚಾರ್ಯ ವಿರಚಿತಂ

ಶ್ರೀಸಿದ್ಧಲಿಂಗಶಿವಯೋಗಿಚರಿತ್ರಂ ಸಂಪೂರ್ಣಂ